# ಶ್ರೀ ವಾದಿರಾಜರ ತೀರ್ಥಪ್ರಬಂಧ

MANISH

ಡಾ. ಶ್ರೀನಿವಾಸ ಹಾವನೂರ





ಪ್ರಸಾರಾಂಗ
ಗುಲಬರ್ಗಾ ವಿಶ್ವವಿದ್ಯಾಲಯ
ಗುಲಬರ್ಗಾ

ದಿ. ರಾಮಕೃಷ್ಣ ತಂತ್ರಿ ಸ್ಮಾರಕ ದತ್ತಿ ಉಪನ್ಯಾಸ ಮಾಲೆ ಪ್ರಕಟನೆ-೧

MANISH
ಮನೀಶ

# ಶ್ರೀ ವಾದಿರಾಜರ
# ತೀರ್ಥ ಪ್ರಬಂಧ

(ಒಂದು ಕಾವ್ಯಾತ್ಮಕ ಸಮೀಕ್ಷೆ)

ಡಾ. ಶ್ರೀನಿವಾಸ ಹಾವನೂರ

೧೯೯೧

ಪ್ರಸಾರಾಂಗ

ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ

ಲೇಖಕರು :
ಡಾ. ಶ್ರೀನಿವಾಸ ಹಾವನೂರ

ಶ್ರೀವಾದಿರಾಜರ ತೀರ್ಥಪ್ರಬಂಧ
ಒಂದು ಕಾವ್ಯಾತ್ಮಕ ಸಮೀಕ್ಷೆ- ಪುಟ : ೫೩+*xii*

ಪ್ರಕಾಶಕರು :
ಶ್ರೀ ಅರವಿಂದ ರಿಸಬಡ I.A.S.
ಕುಲಸಚಿವರು
ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

ಪ್ರಥಮ ಮುದ್ರಣ : 1991 ಪ್ರತಿಗಳು 1000

ಬೆಲೆ : **10/-**

ಮುದ್ರಕರು :

**ಗ್ರಿನೋಬಲ್ಸ್ ಪ್ರಾ. ಲಿ. ಗುಲಬರ್ಗಾ**
ಫೋನ ನಂ. 20822, 21741

ಹಾವನೂರಲ್ಲಿಯ ಶ್ರೀವಾದಿರಾಜರ
ಮೃತ್ತಿಕಾ ವೃಂದಾವನದ ಅರ್ಚಕ
ಹಾಗೂ ನನ್ನ ನಡುವಿನ ತಮ್ಮ-

**ಗಲಗಲಿ ಪುರುಷೋತ್ತಮನಿಗೆ**

# ಮುನ್ನುಡಿ

ಅಧ್ಯಯನ, ಅಧ್ಯಾಪನ, ಗ್ರಂಥ ಪ್ರಕಟಣೆ ಸಂಶೋಧನ ಚಟುವಟಿಕೆಗಳ ಮೂಲಕ ಜ್ಞಾನವಲಯದ ವಿಸ್ತಾರವನ್ನು ಹೆಚ್ಚಿಸುವುದು ಮತ್ತು ಜ್ಞಾನ ವಿತರಣೆ ಮಾಡುವುದು ವಿಶ್ವವಿದ್ಯಾಲಯದ ಕರ್ತವ್ಯವಾಗಿದೆ. ಈ ಕಾರ್ಯ ಚಟುವಟಿಕೆಗಳು ವಿಶ್ವವಿದ್ಯಾಲಯದ ಅಧ್ಯಯನ, ಸಂಶೋಧನ ವಿಭಾಗ ಮತ್ತು ಶಾಲೆ ಕಾಲೇಜುಗಳಿಗೆ ಮಾತ್ರ ಸೀಮಿತವಾಗಿ ಉಳಿಯದೆ ವಿಶಾಲವಾದ ಸಮಾಜದ ತಿಳಿವು ಮತ್ತು ಸಂಸ್ಕೃತಿಯನ್ನು ಉದಾತ್ತೀಕರಿಸುವಲ್ಲಿ ಸಕ್ರಿಯ ಪಾತ್ರ ವಹಿಸಬೇಕಾಗುತ್ತದೆ, ಗುಲಬರ್ಗಾ ವಿಶ್ವವಿದ್ಯಾಲಯ, ಈ ದಿಸೆಯಲ್ಲಿ, ಹಲವಾರು ವಿಧಾಯಕ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ಕಾರ್ಯ ಪ್ರವೃತ್ತವಾಗಿದೆ. ಪ್ರಸಾರಾಂಗದ ಉಪನ್ಯಾಸ ದತ್ತಿಉಪನ್ಯಾಸ ಸಂಶೋಧನ ಗ್ರಂಥ ಪತ್ರಿಕೆ ಪ್ರಕಟಣೆ ಮತ್ತು ಸೇವಾಶಿಬಿರಗಳನ್ನು ನಡೆಸುತ್ತ ಸಾರ್ವಜನಿಕರೊಡನೆ ನಿಕಟ ಸಂಪರ್ಕ ಇಟ್ಟುಕೊಂಡಿದೆ,

ಈ ಮಹತ್‌ಕಾರ್ಯದಲ್ಲಿ ಭಾಗವಹಿಸಿ ಶೈಕ್ಷಣಿಕ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಿರುವ ಎಲ್ಲ ಲೇಖಕ— ವಿದ್ವಾಂಸರಿಗೂ, ಅಧಿಕಾರಿಗಳಿಗೂ, ದತ್ತಿಉಪನ್ಯಾಸಕ್ಕೆ ಧನಸಹಾಯ ನೀಡಿದ ದಾನಿಗಳಿಗೂ ಧನ್ಯವಾದಗಳನ್ನು ಅರ್ಪಿಸಿ ಸಾರಸ್ವತ ಪ್ರಪಂಚ ಮತ್ತು ಶ್ರೀಸಾಮಾನ್ಯರು ವಿಶ್ವವಿದ್ಯಾಲಯದ ಪ್ರಕಟನೆಗಳನ್ನು ಆದರದಿಂದ ಸ್ವಾಗತಿಸುವರೆಂದು ಆಶಿಸುತ್ತೇನೆ.

**ಎನ್. ರುದ್ರಯ್ಯ**
ಕುಲಪತಿಗಳು

**ಜ್ಞಾನಗಂಗಾ**
ಗುಲಬರ್ಗಾ ವಿಶ್ವವಿದ್ಯಾಲಯ
ಗುಲಬರ್ಗಾ–585 106
ದಿನಾಂಕ : 5–12–91

# ಲೇಖಕನಾಗಿ

ಸೋದೆಯ ಶ್ರೀ ವಾದಿರಾಜರ 'ತೀರ್ಥಪ್ರಬಂಧ'ವನ್ನು ನನ್ನ ತರುಣ ವಯದ ಕಾಲದಿಂದಲೂ ಮೆಚ್ಚಿಕೊಂಡಿದ್ದೆ. ಅದರಲ್ಲಿ ಧಾರ್ಮಿಕ ಅಂಶಗಳು ತೀರ ಕಡಿಮೆಯಿದ್ದು, ಕಾವ್ಯಾಂಶವೇ ಅಧಿಕವೆಂಬುದನ್ನು ಮನಗಂಡಿದ್ದೆ. ಅಲ್ಲದೆ ಇಡೀ ಪ್ರಾಚೀನ ವಾಙ್ಮಯದಲ್ಲಿ ಅಪೂರ್ವವೆನಿಸಿದ ಪ್ರವಾಸ ಸಾಹಿತ್ಯವಿದು ಎಂಬ ಭಾವನೆಯೂ ನನ್ನಲ್ಲಿ ಮೂಡಿದ್ದಿತು. ಈಚೆಗೆ ಗುಲಬರ್ಗಾ ವಿಶ್ವ ವಿದ್ಯಾಲಯದವರು ದಿವಂಗತ ರಾಮಕೃಷ್ಣ ತಂತ್ರಿಯವರ ಹೆಸರಿನಲ್ಲಿ ವಿಶೇಷ ಉಪನ್ಯಾಸ ಮಾಡಲೆಂದು ನನ್ನನ್ನು ಕರೆದಾಗ ಮೂರು ದಶಕಗಳ ಕಾಲದಿಂದ ಮನದಲ್ಲಿ ಸ್ಥಾಯಿಯಾಗಿದ್ದ ಈ ಕೃತಿಯನ್ನೇ ಎತ್ತಿಕೊಂಡೆ. ಇದರಲ್ಲಿಯ ವರ್ಣನಾಂಶಗಳನ್ನಷ್ಟೆ ಎತ್ತಿ ತೋರಿಸುವುದಿದ್ದುದರಿಂದ, ಕೃತಿಯ ವಿಮರ್ಶೆಯ ಗೊಡವೆಗೆ ಹೋಗಿಲ್ಲ. ಓದುಗರು ಅದನ್ನು ನಿರೀಕ್ಷಿಸಲೂಬಾರದು. ಇನ್ನೊಂದು ಮಾತು : ಯಾರು ಈಗಾಗಲೇ ತೀರ್ಥಪ್ರಬಂಧವನ್ನು ಸ್ವಮತ ನಿಷ್ಠೆಯಿಂದ, ಗುರುಭಕ್ತಿಯಿಂದ ಓದಿರುವರೋ, ಅಂಥವರನ್ನು ದೃಷ್ಟಿಯಲ್ಲಿಟ್ಟುಕೊಂಡು ಕೃತಿ ವಿವೇಚನೆಗೆ ತೊಡಗಿಲ್ಲ. ಬದಲಿಗೆ ಕಾವ್ಯವೊಂದರ ರಸಾಸ್ವಾದದಲ್ಲಿ ಸಂತೋಷಿಸುವವರನ್ನು ಗಮನದಲ್ಲಿಟ್ಟುಕೊಂಡು, ನಾನು ಮೆಚ್ಚಿಕೊಂಡ ಕಾವ್ಯಾಂಶಗಳನ್ನು ಇಲ್ಲಿ ವಿವರಿಸ ಯತ್ನಿಸಿದ್ದೇನೆ.

ತೀರ್ಥಪ್ರಬಂಧದ ಶ್ಲೋಕಗಳ ಭಾವಾರ್ಥವನ್ನು ಗ್ರಹಿಸುವಲ್ಲಿ ವಿದ್ವಾನ್ ಎಸ್. ವಿ. ಭೀಮಭಟ್ಟರ ಟಿಪ್ಪಣಿಗಳನ್ನು ಧಾರಾಳವಾಗಿ ಬಳಸಿಕೊಂಡಿರುವೆ. ಪ್ರಬಂಧವನ್ನು ಬರೆದಾದ ಮೇಲೆ, ನನ್ನ ಆತ್ಮೀಯ ಮಿತ್ರರಾದ ವಿದ್ವಾನ್ ಬನ್ನಂಜೆ ಗೋವಿಂದಾಚಾರ್ಯರಿಗೆ ತೋರಿಸಿದೆ. ಅವರು ಎತ್ತಿ ತೋರಿದ ಕೆಲವು ತಪ್ಪುಗಳು ಹಾಗೇ ಉಳಿದು ಬಿಟ್ಟಿದ್ದರೆ ಅನರ್ಥವೇ ಆಗುತ್ತಿತ್ತು;

ಇವರಿಬ್ಬರಿಗೆ ಸಮನಾಗಿ ನನ್ನ ಕೃತಜ್ಞತೆಗೆ ಪಾತ್ರರಾದವರೆಂದರೆ, ಸ್ಥಳೀಯ ಎಸ್. ವಿ. ಪಿ. ಕಾಲೇಜಿನ ಪ್ರಾಂಶುಪಾಲರಾದ ಪ್ರೊ : ವಸಂತ

ಕುಪ್ಪಗಿಯವರು. ಈ ವಾಖ್ಯಾನ ಮಾಲೆಗೆ ಪ್ರೇರಣೆ ಮತ್ತು ಚಾಲನೆ ಅವರಿಂದಲೇ ಒದಗಿ ಬಂದಿದೆ. ಅದರಂತೆ ತಮ್ಮ ದಿವಂಗತ ಪತಿಯ ನೆನವನ್ನು ಉಳಿಸಲು ಶ್ರೀಮತಿ ಸರಸ್ವತಿ ತಂತ್ರಿಯವರು ಅನನ್ವಿತ ಶ್ರದ್ಧೆಯಿಂದ ಈ ವ್ಯಾಖ್ಯಾನ ಮಾಲೆಯನ್ನು ಪೋಷಿಸುತ್ತಿರುವುದು ನನ್ನಲ್ಲಿ ಅವರ ಬಗ್ಗೆ ಆದರ ಭಾವವನ್ನು ಮೂಡಿಸಿದೆ.

ಪ್ರಸಾರಾಂಗದ ನಿರ್ದೇಶಕರಾದ ಡಾ. ಲಕ್ಕೆಯವರು ನನ್ನ ದೀರ್ಘ ಕಾಲೀನ ಸ್ನೇಹಿತರು, ನನ್ನ ಉಪನ್ಯಾಸವನ್ನು ನೆರವೇರಿಸಿ, ಅದರ ಪ್ರಕಟನೆ ಯನ್ನು ಆಸಕ್ತಿಯಿಂದ ಕೈಕೊಂಡದ್ದರಲ್ಲಿ ಪರಸ್ಪರರ ಸ್ನೇಹವೂ ಪಾಲ್ಗೊಂಡಿರು ವುದನ್ನು ನಾನಿಲ್ಲಿ ಕಾಣಿಸಬೇಕು.

ಶುಭತಾರಾ, ಚಾಫೇಕರ ಮಾರ್ಗ — ಶ್ರೀನಿವಾಸ ಹಾವನೂರ
ಪುಣೆ-4
ಅಗಸ್ಟ 1991

# ಪರಿವಿಡಿ

ಪುಟ

ಮುನ್ನುಡಿ —ಉಪಕುಲಪತಿಗಳಿಂದ

ಪ್ರಸ್ತಾವನೆ —ನಿರ್ದೇಶಕರಿಂದ

ಲೇಖಕನಾಗಿ

೧. ಶ್ರೀ ವಾದಿರಾಜರ ಬದುಕಿನ ವೈಶಿಷ್ಟ್ಯ ೩

೨. ತೀರ್ಥಪ್ರಬಂಧದ ಸ್ಥೂಲ ಪರಿಚಯ ೧೦

೩. ನದಿ; ಸಂಗಮಗಳು ೧೨

೪. ಕ್ಷೇತ್ರಸ್ಥ ದೇವತೆಗಳು ೨೨

೫. ಶ್ರೀ ವಾದಿರಾಜರು ಕಂಡ ಶಿವ ೩೬

೬. ತೀರ್ಥಪ್ರಬಂಧದ ಪದ್ಯಬಂಧ ೪೫

ಸಮಾರೋಪ ೪೭

ಅನುಬಂಧಗಳು :

(ಅ) 'ಕನ್ನಡ ಮಹಾಭಾರತ ತಾತ್ಪರ್ಯ ನಿರ್ಣಯ' ಮತ್ತು 'ಶ್ರೀಕೃಷ್ಣ ಬಾಲಲೀಲೆ' ೧

(ಆ) ಸಮರಪುಂಗವ ದೀಕ್ಷಿತನ' ಯಾತ್ರಾ ಪ್ರಬಂಧ' ೫

# ಕೃತಜ್ಞತೆಗಳು

ದಕ್ಷಿಣ ಕನ್ನಡ ಜಿಲ್ಲೆಯ ಪಾದೂರಿನ ದಿ. ಶ್ರೀ ರಾಮಕೃಷ್ಣ ತಂತ್ರಿ ಅವರು ಎರಡನೇ ಈಯತ್ತೆವರೆಗೆ ಅಭ್ಯಾಸ ಮಾಡಿ 14ನೇ ವಯಸ್ಸಿನವರೆಗೆ ಉಡುಪಿಯ ಸೋದೆಮಠದಲ್ಲಿ ಸಂಸ್ಕೃತ ಅಧ್ಯಯನ ಮಾಡಿ, ಧರ್ಮಶಾಸ್ತ್ರಗಳನ್ನು ತಿಳಿದು ಕೊಂಡವರಾಗಿದ್ದರು.

ತಮ್ಮ 15ನೇ ವಯಸ್ಸಿಗೆ ಬಳ್ಳಾರಿಗೆ ಬಂದು ಶ್ರೀ ಗೋಪಾಲಕೃಷ್ಣ ಸಾಮಗ ಬೆಳ್ಳೆ ಎಂಬವರ 'ಆರೋಗ್ಯಭವನ'ದ ಮೇಲ್ವಿಚಾರಿಕೆಯನ್ನು ವಹಿಸಿ ಕೊಂಡರು. ಹೊಸಪೇಟೆ, ರಾಮದುರ್ಗ ಮೊದಲಾದ ಸ್ಥಳಗಳಲ್ಲಿ ಶ್ರಮಜೀವಿ ಗಳಾಗಿ ಚಹಾ ಫರಾಳದ ಅಂಗಡಿಗಳನ್ನು ನಡೆಸಿದರು. ಹೋಟಲ್ ಆಡಳಿತದಲ್ಲಿ ನಿಷ್ಣಾತರಾದ ಶ್ರೀ ರಾಮಕೃಷ್ಣ ಅವರು 1953-54ರಲ್ಲಿ ಕಲಬುರ್ಗಿಗೆ ಬಂದು 'ಶ್ರೀ ಕೃಷ್ಣಭವನ' ಹೋಟಲ್ ಮೇಲ್ವಿಚಾರಣೆ ವಹಿಸಿಕೊಂಡರು, 1956ರಲ್ಲಿ ಮುರಳಿ ಕೆಫೆ, ಮೋಹನಲಾಜ್, ಮೋಹನ ಕಾಟೇಜ್‌ಗಳನ್ನು ಕಟ್ಟಿದರು. ಹೋಟಲ್ ಉದ್ಯಮದಲ್ಲಿ ಪಳಗಿದವರಾದ ರಾಮಕೃಷ್ಣರಿಂದ ಕಲಬುರ್ಗಿ ನಾಗರಿಕತೆಯಲ್ಲಿ ಮುಂದುವರಿಯಿತು. ಕಡುಬಡವರಾಗಿ ಕಷ್ಟ ಅನುಭವಿಸಿದ ತಂತ್ರಿಯವರು ಬಡಮಕ್ಕಳು ವಿದ್ಯಾವಂತರಾಗಲು- ಹಲವಾರು ಕಲ್ಯಾಣ ಕಾರ್ಯಕ್ರಮ ಹಮ್ಮಿಕೊಂಡರು. ಜಯತೀರ್ಥ ವಿದ್ಯಾರ್ಥಿನಿಲಯ ಪ್ರಾರಂಭಿಸಿದರು. ಕೈಲಾದ ಮಟ್ಟಿಗೆ ಬಡಮಕ್ಕಳಿಗೆ ಕೈಮುಚ್ಚಿ ದಾನ ಮಾಡಿದರು, ಕಲಬುರ್ಗಿಯ ಶ್ರೀಕೃಷ್ಣನ ಗುಡಿ, ಉಡುಪಿಯ ಶ್ರೀಕೃಷ್ಣಮಂದಿರದಲ್ಲಿಯ ಹಾಲುಗಲ್ಲಿನ ಹಾಸಿಗೆ-ಸೋದೆಯ ಮಠದಲ್ಲಿಯ ಕೋಣೆಗಳು, ಅಜ್ಮೀರ ದರ್ಗಾ ತಿರುಪತಿ, ಮಂತ್ರಾಲಯ, ಮಾನ್ಯಖೇಟ್ ಮೊದಲಾದ ಕಡೆಗಳಲ್ಲಿ ನೀಡಿದ ಸೇವೆ ಗುಪ್ತಗಾಮಿನಿಯಾಗಿ ಹರಿದಿದೆ. ಶ್ರೀ ತಂತ್ರಿಯವರು ಬರಗಾಲದ ಸಂದರ್ಭದಲ್ಲಿ ಗಂಜೀ ಕೇಂದ್ರಗಳನ್ನು ಗೋಶಾಲೆಗಳನ್ನು ತೆರೆದದ್ದು ಸ್ತುತ್ಯಕಾರ್ಯವಾಗಿದೆ.

ಕಡಲು ತೀರದಿಂದ ಕಲಬುರ್ಗಿಗೆ ಬಂದ ತಂತ್ರಿಯವರಿಗೆ ದುಡಿಮೆಯಲ್ಲಿ ಶ್ರದ್ಧೆ, ಉದ್ಯೋಗದಲ್ಲಿ ಪ್ರಾಮಾಣಿಕತೆ, ದೇವರಲ್ಲಿ ವಿಶ್ವಾಸವಿದ್ದಂತೆ ಸಾಹಿತ್ಯ-

ಸಂಗೀತ-ಕಲೆಗಳಲ್ಲಿಯೂ ಅಷ್ಟೇ ಆಸಕ್ತಿ, ಅಭಿಮಾನ; ಹರಿದಾಸ ಸಾಹಿತ್ಯವೆಂದ ರಂತೂ ತಂತ್ರಿಯವರಿಗೆ ಪಂಚಪ್ರಾಣ. ಸ್ವಂತ ಕಾಲಮೇಲೆ ನಿಂತು ದುಡಿದು, ಶ್ರೀಮಂತಿಕೆಯ ಜೊತೆಗೆ ಹೃದಯ ಶ್ರೀಮಂತಿಕೆಯನ್ನೂ ಬೆಳೆಸಿಕೊಂಡು ಬಂದ ಶ್ರೀಮಂತ ತಂತ್ರಿಯವರು ಸಾಧ್ವಿಮಣಿ ಸರಸ್ವತಿ ತಂತ್ರಿ ಧರ್ಮಪತ್ನಿಯವ ರೊಂದಿಗೆ ಆದರ್ಶದ ಬಾಳು ಸಾಗಿಸಿದ ಆದರ್ಶ ದಂಪತಿಗಳು. ವಿಧಿಯಾಟ. ಹೈದ್ರಾಬಾದಿಗೆ ಕಾರಿನಲ್ಲಿ ಹೋಗುವಾಗ ದಿ. 23 ಜೂನ್ 1982ರಂದು ಜಹಿರಾ ಬಾದ ಸಮೀಪ ಅಪಘಾತಕ್ಕೀಡಾಗಿ ಕೃಷ್ಣನ ಸನ್ನಿಧಾನ ಸೇರಿದರು.

ಪತಿಯ ಸ್ಮಾರಕವೆಂದು ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಶ್ರೀಮತಿ ಸರಸ್ವತಿ ತಂತ್ರಿಯವರು ದತ್ತಿನಿಧಿಯನ್ನು ನೀಡಿ ಪ್ರತಿ ವರುಷವೂ ದಾಸಸಾಹಿತ್ಯ ಕುರಿತು ನಾಡಿನ ಶ್ರೇಷ್ಠ ವಿದ್ವಾಂಸರಿಂದ ಉಪನ್ಯಾಸಗಳನ್ನು ಏರ್ಪಡಿಸಲು ಅನುವು ಮಾಡಿಕೊಟ್ಟದ್ದಕ್ಕೆ ಕೃತಜ್ಞತೆಗಳು. ಈ ವಿಶೇಷ ಉಪನ್ಯಾಸಗಳನ್ನು ಮುದ್ರಿಸಿ ಪ್ರಕಟಿಸುವ ಸಾಹಸವನ್ನು ವಿಶ್ವವಿದ್ಯಾಲಯ ಕೈಕೊಳ್ಳುತ್ತಿದೆ. ಅದರ ಅಂಗವಾಗಿ ಈ ಪುಸ್ತಕ 'ಶ್ರೀ ವಾದಿರಾಜರ **ತೀರ್ಥ ಪ್ರಬಂಧ**' ಪ್ರಕಟಗೊಳ್ಳು ತ್ತಿರುವುದು ಹೆಮ್ಮೆಯ ವಿಷಯವಾಗಿದೆ. ಉಪನ್ಯಾಸ ನೀಡಿ, ಹಸ್ತಪ್ರತಿ ಸಿದ್ಧ ಪಡಿಸಿಕೊಟ್ಟ ಡಾ. ಶ್ರೀನಿವಾಸ ಹಾವನೂರ ಅವರಿಗೂ, ತಂತ್ರಿ ಸಲಹಾ ಸಮಿ ತಿಯ ಸದಸ್ಯರಿಗೂ, ಹಸ್ತಪ್ರತಿ ಪರಿಶೀಲನೆ ಮಾಡಿದ ಪ್ರೊ. ವಸಂತ ಕುಷ್ಟಗಿ ಅವರಿಗೂ, ವಿಶ್ವವಿದ್ಯಾಲಯದ ಕುಲಪತಿಗಳಿಗೂ, ಅಧಿಕಾರಿಗಳಿಗೂ ಹಾಗು ಅಲ್ಪಾವಧಿಯಲ್ಲಿ ಸುಂದರವಾಗಿ ಮುದ್ರಿಸಿಕೊಟ್ಟ ಸ್ಥಳೀಯ ಮುದ್ರಣಾಲಯದ ಶ್ರೀ ರಾಜೇಂದ್ರ ಪಾಟೀಲ ಮತ್ತು ಸಿಬ್ಬಂದಿಗೂ ಕೃತಜ್ಞತೆಗಳು.

ಎಮ್. ಎಸ್ ಲಠ್ಠೆ
ನಿರ್ದೇಶಕ ಪ್ರಸಾರಾಂಗ

ದಿನಾಂಕ : 6-12-1991

# ಅಭಿಪ್ರಾಯ

ಡಾ. ಶ್ರೀನಿವಾಸ ಹಾವನೂರ ಅವರು ಕರ್ನಾಟಕದ ಶ್ರೇಷ್ಠ ಸಂಶೋಧಕರು ಮತ್ತು ಶ್ರೇಷ್ಠ ವಿಮರ್ಶಕರು. ಅವರಿಗೆ ಅವರದೇ ಆದ ವಿಶಿಷ್ಟ ಸ್ಥಾನವು ಕನ್ನಡ ಸಾಹಿತ್ಯದ ಇತಿಹಾಸದಲ್ಲಿದೆ. ಅವರು ನೀಡಿದ 'ಶ್ರೀ ವಾದಿರಾಜರ ತೀರ್ಥ ಪ್ರಬಂಧ' ಎಂಬುದು ಕೂಡ ಒಂದು ಉತ್ತಮವಾದ ಕೃತಿ.

ಈ ಚಿಕ್ಕ ಪುಸ್ತಕದಲ್ಲಿ ಶ್ರೀ ವಾದಿರಾಜರ ತೀರ್ಥ ಪ್ರಬಂಧ ಕುರಿತು ಆಳವಾದ ಅಧ್ಯಯನ ಮಾಡಿ, ಆ ಗ್ರಂಥದ ಮಹತ್ವವನ್ನು ಎತ್ತಿ ತೋರಿಸಲಾಗಿದೆ. ಶ್ರೀ ವಾದಿರಾಜರು ಶ್ರೀ ವ್ಯಾಸರಾಯರ ಪ್ರಮುಖ ಶಿಷ್ಯರಲ್ಲಿ ಒಬ್ಬರಾಗಿದ್ದು ಶ್ರೇಷ್ಠ ಧರ್ಮ ತತ್ವಜ್ಞರಾಗಿರುವಂತೆ ಉತ್ತಮ ಕವಿಗಳೂ ಆಗಿದ್ದಾರೆ. ಅದಕ್ಕೆ ಸಾಕ್ಷಿ ಅವರ 'ತೀರ್ಥ ಪ್ರಬಂಧ' ಈ ಕೃತಿಯಲ್ಲಿರುವ ಕಾವ್ಯಾಂಶಗಳನ್ನು ಎತ್ತಿ ತೋರಿಸುವುದರ ಜೊತೆಗೆ ಪ್ರಾಚೀನ ವಾಙ್ಮಯದ ಪ್ರವಾಸ ಸಾಹಿತ್ಯಕ್ಕೆ ಇದೊಂದು ಅಪೂರ್ವ ಕೃತಿಯೆಂಬುದನ್ನೂ ಈ ಲೇಖಕರು ತೋರಿಸಿದ್ದಾರೆ. ಅಲ್ಲದೆ 'ತೀರ್ಥ ಪ್ರಬಂಧದಲ್ಲಿ' ಬರುವ ನದಿ, ಸಂಗಮಗಳು, ಕ್ಷೇತ್ರ ದೇವತೆಗಳು ಇತ್ಯಾದಿಗಳ ಬಗ್ಗೆ ಲೇಖಕರು ನೀಡಿದ ವಿವರಣೆಗಳು ಇಂದಿನ ಯಾತ್ರಿಕರಿಗೆ ಕವಿಯ ಕಣ್ಮನಗಳನ್ನು ನೀಡುವಲ್ಲಿ ಸಮರ್ಥ ಪ್ರೇರಣೆಗಳಾಗಿವೆ. ಆದ್ದರಿಂದ ಈ ಪುಸ್ತಕದಿಂದ ಕನ್ನಡ ಜನತೆ, ಶ್ರೀ ವಾದಿರಾಜರ ಮೂಲಕೃತಿಗಳನ್ನು ಓದಿ ಕೃತಾರ್ಥರಾಗಲು ದಾರಿಯನ್ನು ಕಂಡುಕೊಳ್ಳುತ್ತಾರೆಂಬುದರಲ್ಲಿ ನಿಸ್ಸಂಶಯ; ಮತ್ತು ಈ ಪುಸ್ತಕವನ್ನು ಓದುವುದರಿಂದ, ಕಾವ್ಯಾಂಶಗಳ ಹಿನ್ನೆಲೆಯಲ್ಲಿ ಪ್ರವಾಸ ಸಾಹಿತ್ಯವನ್ನು ಎಷ್ಟು ರಸಾತ್ಮಕವಾಗಿಯೂ, ಸಮರ್ಥನೀಯವಾಗಿಯೂ ಶ್ರೀ ವಾದಿರಾಜರು ನೀಡಿದ್ದಾರೆಂಬುದರ ಬಗೆಗೂ ಅಭಿಮಾನ ಮೂಡಿ ಬರುತ್ತದೆ.

**ವಸಂತ ಕುಷ್ಟಗಿ**
ಪ್ರಿನ್ಸಿಪಾಲ
ಎನ್. ವ್ಹಿ. ಪದವಿ ಮಹಾ ವಿದ್ಯಾಲಯ
ಗುಲಬರ್ಗಾ

೧೦-೦೨-೧೯೯೦

# ಶ್ರೀ ವಾದಿರಾಜರ ತೀರ್ಥಪ್ರಬಂಧ

## (ಒಂದು ಕಾವ್ಯಾತ್ಮಕ ಸಮೀಕ್ಷೆ)

'ದಿ. ರಾಮಕೃಷ್ಣ ತಂತ್ರಿ ಸ್ಮಾರಕ ಉಪನ್ಯಾಸ'ಕ್ಕೆ ಸೋದೆಯ ಶ್ರೀ ವಾದಿರಾಜರ ವಿಷಯವನ್ನು ಆಯ್ದುಕೊಂಡದ್ದಕ್ಕಾಗಿ ನನ್ನನ್ನು ನಾನೇ ಅಭಿನಂದಿಸಿಕೊಳ್ಳಬೇಕಾಗಿದೆ. ಶ್ರೀ ವಾದಿರಾಜರು ನನಗೆ ಆರಾಧ್ಯ ಗುರುಗಳು. ಅವರ ಕೃತಿಗಳಲ್ಲಿಯ ಕಲ್ಪಕ ಸೌಂದರ್ಯವನ್ನು ಮೆಚ್ಚಿಕೊಂಡು ಇಲ್ಲಿಯ ಉಪನ್ಯಾಸಕ್ಕಾಗಿ ಅವರ ವಿಷಯವನ್ನು ಆಯ್ದುಕೊಂಡೆ. ಆದರೆ ದಿ. ರಾಮಕೃಷ್ಣ ತಂತ್ರಿಯವರಿಗೂ ಈ ಯತಿವರರು ಪರಮ ಗುರುಗಳೆಂದೂ ಅವರ ವೃಂದಾವನವಿರುವ ಸೋದೆಗೆ ತಂತ್ರಿಗಳು ವರ್ಷದಲ್ಲಿ ಹಲವಾರು ಬಾರಿ ಹೋಗಿ ಮನಶ್ಶಾಂತಿಯನ್ನೂ ಕಾರ್ಯೋತ್ಸಾಹವನ್ನೂ ಮೈಗೂಡಿಸಿಕೊಂಡು ಬರುತ್ತಿದ್ದುದಾಗಿ ಇಲ್ಲಿಗೆ ಬಂದ ಮೇಲೆ ತಿಳಿಯಿತು. ಆದ್ದರಿಂದ ನಾನು ಆಯ್ದುಕೊಂಡ ವಿಷಯವು ತಂತ್ರಿಯವರ ಪತ್ನಿ ಶ್ರೀಮತಿ ಸರಸ್ವತಿಯವರಿಗೂ ಮೆಚ್ಚಿಗೆಯದಾಗಿದೆ. ಸಂತೋಷದ ವಿಷಯ.

ಶ್ರೀ ವಾದಿರಾಜರನ್ನು ಕುರಿತು ನಾನು ದೂರದ ಗುಲ್ಬರ್ಗದಲ್ಲಿ ಮಾತನಾಡಲು ಇನ್ನೊಂದು ಕಾರಣವಿದೆ. ಉಡುಪಿಯ ಅಷ್ಟಮಠೀಯ ಅನುಯಾಯಿಗಳಿಗೂ ಉತ್ತರ ಕರ್ನಾಟಕವಲ್ಲಿರುವ ಅದೇ ಮತದವರಿಗೂ ಮಾನಸಿಕ ದೂರವಿದ್ದು ಅದನ್ನು ಕಡಿಮೆಗೊಳಿಸುವಲ್ಲಿ ಶ್ರೀ ವಾದಿರಾಜರ ಪ್ರಭಾವವು ಪ್ರಥಮ ಹಂತವಾಗಿದೆ. ಅವರು ವೃಂದಾವನಸ್ಥರಾದ ಸೋದೆಯು ಉತ್ತರ ಕನ್ನಡ ಜಿಲ್ಲೆಯಲ್ಲಿದೆ. ಅವರ ಪ್ರಾಚೀನವಾದ ಮೃತ್ತಿಕಾ ವೃಂದಾವನಗಳು ಧಾರವಾಡ ಜಿಲ್ಲೆಯ ಸವಣೂರು, ಹಾವನೂರುಗಳಲ್ಲಿವೆ. ಜಮಖಂಡಿ ಮುಂತಾದ ಬಿಜಾಪುರ ಜಿಲ್ಲೆಯ ಊರುಗಳಲ್ಲಿ ಹಲವು ಭಾವುಕರು ಶ್ರೀ ವಾದಿರಾಜರನ್ನೇ ತಮ್ಮ ಆರಾಧ್ಯ ಗುರುಗಳನ್ನಾಗಿ ಮಾಡಿಕೊಂಡರು—ಇನ್ನೂರು ವರ್ಷಗಳಷ್ಟು ಹಿಂದಿನ ಕಾಲದಲ್ಲಿ. ಆ ಪರಂಪರೆ ಇಂದಿಗೂ ಮುಂದುವರೆದಿದೆ. ಇನ್ನು ಅವರ ಹಲ

ವಾರು ಕೃತಿಗಳನ್ನು ಆಳವಾಗಿ ಮನನ ಮಾಡಿದವರಾಗಿ, ಅವುಗಳ ವಿಷಯವನ್ನು ಉತ್ತರ ಕರ್ನಾಟಕದ ಭಾಷಾಶೈಲಿಯ ಗ್ರಂಥಗಳಲ್ಲಿ ತಂದು, ಅವುಗಳ ಕರ್ತೃತ್ವವನ್ನು ಶ್ರೀ ವಾದಿರಾಜರಿಗೇ ಅಂಟಿಸಿದ್ದಾರೆ* ಎಲ್ಲಕ್ಕಿಂತ ಹೆಚ್ಚಾಗಿ, ಇವತ್ತು ಉತ್ತರ ಕರ್ನಾಟಕಸ್ಥರು ನಿತ್ಯ ಹೇಳುವ ಸಂಸ್ಕೃತ ಶ್ಲೋಕ ಮತ್ತು ಕನ್ನಡ ಹಾಡುಗಳಲ್ಲಿ ಹೆಚ್ಚಿನವು ವಾದಿರಾಜಕೃತವೇ ಆಗಿವೆ (ಉದಾ.ಗೆ 'ಪಾಲಯಾಚ್ಯುತ' ಸ್ತೋತ್ರ, ಲಕ್ಷ್ಮಿಶೋಭಾನದ ಹಾಡು' ಇತ್ಯಾದಿ)

---

* ಉದಾಹರಣೆಗೆ 'ಮಹಾಭಾರತ ತಾತ್ಪರ್ಯ ನಿರ್ಣಯಕ್ಕಿರುವ ಕನ್ನಡ ಟೀಕೆ. ಮೂಲದ ಸಂಸ್ಕೃತ ಟೀಕೆಯನ್ನು ವಾದಿರಾಜರು ಬರೆದದ್ದು ನಿಜ. ಆದರೆ ಅದರ ಕನ್ನಡ ರೂಪಾಂತರ ಅವರಿಂದ ಲಿಖಿತವಾದದ್ದಲ್ಲ ಅದರಂತೆ 'ಶ್ರೀ ಕೃಷ್ಣಬಾಲಲೀಲೆ' ಎಂಬ ಕನ್ನಡ ದ್ವಿಪದಿ ಕಾವ್ಯ. 'ಹಯವದನ' ಅಂಕಿತ ಮಾತ್ರದಿಂದ ಅದು ವಾದಿರಾಜ ರಚಿತ ಎನ್ನಲು ಬರುವದಿಲ್ಲ. ಇದರ ಶೈಲಿ, ವಾದಿರಾಜರ ಇತರ ಅನೇಕ ಅಧಿಕೃತ ಕೀರ್ತನೆಗಳಿಗಿಂತ ತೀರ ಭಿನ್ನವಾದದ್ದು. ಉತ್ತರ ಕರ್ನಾಟಕದ ದೇಸಿಯಲ್ಲಿ, ಆ ವಾಗ್ರೂಢಿಯಲ್ಲಿ ಅದ್ದಿ ತೆಗೆದದ್ದು. ವಿವರಗಳಿಗೆ ಅನುಬಂಧ ೧ ನೋಡುವುದು.

# ೧. ಶ್ರೀ ವಾದಿರಾಜರ ಬದುಕಿನ ವೈಶಿಷ್ಟ್ಯ

ಉಡುಪಿಯ ಅಷ್ಟ ಮಠಗಳಲ್ಲಿ ಒಂದರ ಪೀಠಾಧಿಪತಿಗಳಾಗಿದ್ದ ಶ್ರೀ ವಾದಿರಾಜರು ಹದಿನಾರನೆಯ ಶತಮಾನದವರು (೧೪೮೦-೧೬೦೦), ಅವರ ಜೀವಿತ ಕಾಲದಲ್ಲಿ ವಿಜಯನಗರದ ಕೃಷ್ಣದೇವರಾಯನಿಂದ ಹಿಡಿದು ವೆಂಕಟಪತಿ ರಾಜನವರೆಗೆ ನಾಲ್ವರು ಅರಸರು ಆಗಿಹೋದರು. ಶ್ರೀ ವ್ಯಾಸರಾಯರು ಹಾಗೂ ಪುರಂದರದಾಸ, ಕನಕದಾಸರು ವಾದಿರಾಜರಿಗೆ ಸಮಕಾಲೀನರು. ನಾಡಿನ ಧಾರ್ಮಿಕ, ಸಾಮಾಜಿಕ ಜೀವನದಲ್ಲಿ ಇವರಷ್ಟು ದೀರ್ಘಕಾಲ ಬೆರೆತು ಬಾಳಿದ ಬೇರಾವ ಗಣ್ಯವ್ಯಕ್ತಿ ಆ ಮಧ್ಯಯುಗದಲ್ಲಿ ಇರಲಿಲ್ಲ,

ಶ್ರೀ ವಾದಿರಾಜರ ಸಮಗ್ರ ಪರಿಚಯವನ್ನು ನಾನೀಗ ಮಾಡಿಕೊಡುತ್ತಿಲ್ಲ. ಅವರ ಬಹುಮುಖ ವ್ಯಕ್ತಿತ್ವ ಹಾಗೂ ಕೃತಿ-ಸಂಪದವನ್ನು ವಿವೇಚಿಸಲು ಇಂಥ ಹತ್ತಾರು ಉಪನ್ಯಾಸಗಳೂ ಸಾಕಾಗುವುದಿಲ್ಲ. ಆದ್ದರಿಂದ ಇವತ್ತಿನ ಉಪನ್ಯಾಸ ಕ್ಕಾಗಿ ನಾನು ಅವರ ಒಂದು ಕೃತಿಯನ್ನು ಮಾತ್ರ ಆಯ್ದುಕೊಂಡಿದ್ದೇನೆ. ಅದುವೆ ತೀರ್ಥಪ್ರಬಂಧ. ಮೂಲತಃ ಸಾಹಿತ್ಯದ ಅಭ್ಯಾಸಿಯಾದ ನಾನು ಅವರ ಈ ಲೌಕಿಕ ಕೃತಿಯಲ್ಲಿಯ ಕಾವ್ಯ ಸೌಂದರ್ಯವನ್ನಷ್ಟೆ ನಿಮ್ಮ ಗಮನಕ್ಕೆ ತರಬಯಸಿದ್ದೇನೆ. ಅದಕ್ಕೆ ಮೊದಲು ಅವರ ಬದುಕಿನ ವೈಶಿಷ್ಟ್ಯ ಹಾಗೂ ಕೃತಿ ರಚನೆಯ ಹಿನ್ನೆಲೆ ಇವನ್ನು ತುಸು ನೋಡೋಣ.

ಬಾಹ್ಯ ನೋಟಕ್ಕೆ ಒಡೆದು ತೋರುವ ಅಂಶಗಳೆಂದು ಅವರ ನಿಸರ್ಗ ಪ್ರೇಮ ಹಾಗೂ ಅವರ ಸಂಚಾರಪ್ರಿಯತೆ ಇವನ್ನು ಮೊದಲಿಗೆ ಹೇಳಬೇಕೆನಿಸು ವುದು. ನದಿ, ವನ, ಪರ್ವತಗಳು ಅವರ ಹೃದಯಕ್ಕೆ ಅತ್ಯಂತ ಹತ್ತಿರವಾಗಿ ದ್ದವು. ಅವುಗಳನ್ನು ಕಂಡೊಡನೆಯೇ ತನ್ಮಯರಾಗಿ ಬಿಡುತ್ತಿದ್ದರು. ಇದರ ಮೂಲ ಕಾರಣವೆಂದರೆ ಅವರು ಸೃಷ್ಟಿಯ ಪ್ರತಿಯೊಂದು ಅಂಗದಲ್ಲಿ ಭಗವಂತನ ಕೈವಾಡವನ್ನೆ ಕಾಣುತ್ತಿದ್ದದ್ದು.

ಇವರ ಈ ಸಂಚಾರಪ್ರಿಯತೆ, ಒಂದಲ್ಲ ಮೂರು ಬಾರಿ, ಅಖಿಲಭಾರತ ಪ್ರವಾಸ ಮಾಡಿಸಿತು. ದಿಗ್ವಿಜಯ, ಪರಮತ ಖಂಡನೆ–ಎಂಬ ಕಾರಣಗಳು ದ್ವಿತೀಯ ಮಹತ್ವದವು. ಬದರಿಗೆ ಹೋದರು; ಅಲ್ಲಿಯ ವಾತಾವರಣದಿಂದ ಆಕರ್ಷಿತರಾದರು. ಅದು ವೇದವ್ಯಾಸರ ನೆಲೆಯೂ ಹೌದು. ಸಾಕಷ್ಟು ದಿನಗಳನ್ನು ಅಲ್ಲಿ ಕಳೆದರು; ಗ್ರಂಥ ರಚಿಸಿದರು. ಅದರಂತೆ ಶ್ರೀ ಕೃಷ್ಣನ ಮೂಲ ಸ್ಥಾನವೆಂಬ ಕಾರಣದಿಂದ ದ್ವಾರಕೆಗೆ ಹೋದರು. ಒಂದೆರಡು ತಿಂಗಳ ನ್ನಾದರೂ, ಅವರು ಅಲ್ಲಿ ಖುಶಿಯಿಂದ ಕಳೆದಿರಬೇಕು. ಅದರಂತೆ ಆಗಿನ ವಿದ್ಯಾಕೇಂದ್ರಗಳೆನಿಸಿದ ಶೃಂಗೇರಿ ಮೊದಲಾದವನ್ನೂ ಸಂದರ್ಶಿಸಿದರು. ಇವತ್ತು ವಿವೇಚಿಸಲಿರುವ 'ತೀರ್ಥಪ್ರಬಂಧ'ವು ಅವರ ಸಂಚಾರಪ್ರಿಯತೆಯ ಫಲವಾಗಿದೆ.

ಅವರೊಬ್ಬ ಮಹಾನ್ ಯೋಜಕರು (Planner) ಶ್ರೀ ಕೃಷ್ಣನ ಮೂರ್ತಿ ಯನ್ನು ಪ್ರಸ್ಥಾಪಿಸಿ ಶ್ರೀಮಧ್ವಾಚಾರ್ಯರು ಉಡುಪಿಯನ್ನು ಪವಿತ್ರ ಕ್ಷೇತ್ರ ವನ್ನಾಗಿ ಮಾಡಿದ್ದರಷ್ಟೆ. ಅವನ ದರ್ಶನಕ್ಕಾಗಿ ಬರುವ ಭಕ್ತಮಂಡಲಿಯ ಸೌಕರ್ಯ ದೃಷ್ಟಿಯನ್ನಿರಿಸಿಕೊಂಡು, ವಾದಿರಾಜರು ಸೂಕ್ತ ವ್ಯವಸ್ಥೆ ಮಾಡಿ, ಉಡುಪಿಯನ್ನು ಒಂದು ನಿರಂತರ ಯಾತ್ರಾ ಸ್ಥಾನವಾಗುವಂತೆ ಮಾಡಿದರು. ಶ್ರೀಕೃಷ್ಣನ ಎರಡೆರಡು ತಿಂಗಳ ಪಾಳಿಯ ಪೂಜಾಕ್ರಮವನ್ನು ಈಗಿನ ಎರಡು ವರ್ಷದ ಪರ್ಯಾಯವಾಗಿ ಮಾಡಿದವರು ವಾದಿರಾಜರೇ. ತಮ್ಮ ಅನಂತರದ ವೃಂದಾವನ ಸ್ವರೂಪ ಹೇಗಿರಬೇಕೆಂದು ಮೊದಲಿಗೆಲ್ಲ ರೂಪಿಸುವಷ್ಟು ಅವರ ಯೋಜನಾಬದ್ಧತೆಯು ಕೆಲಸ ಮಾಡಿದೆ. ಶಿಲ್ಪ ಕಲೆಯಲ್ಲಿ ವಿಶೇಷ ಬಲ್ಲಿದ ರಾದ್ದರಿಂದ ಸೋದೆಯಲ್ಲಿ ತ್ರಿವಿಕ್ರಮ ದೇವರ ಗುಡಿ ಮುಂತಾದ್ದರ ಹೊಳಹನ್ನು ಹಾಕಿಕೊಟ್ಟರು (ಸ್ವಂತದ ಕಂಚಿನ ಮೂರ್ತಿಯನ್ನು ರೂಪಿಸಿ ತಮ್ಮ ತಾಯಿಗೆ ಅರ್ಪಿಸಿದರಲ್ಲವೇ?)

ಶ್ರೀ ವಾದಿರಾಜರು ತಮ್ಮ ಜೀವಿತ ಕಾಲದಲ್ಲಿ ವ್ಯಾಪಕವಾಗಿ ಜನಸಂಪರ್ಕ ವನ್ನು ಹೊಂದಿದ್ದುದು ಕಂಡು ಬರುತ್ತದೆ. ಯತಿಗಳ ಬದುಕು ಸಾಮಾನ್ಯವಾಗಿ

ದೇವತಾ ಪೂಜೆ, ಪ್ರವಚನಗಳಿಗೆ ಸೀಮಿತವಾಗಿರುತ್ತದೆ. ಅನ್ಯಮತದವರೊಡನೆ ಯಾಗಲಿ ಸಾಮಾನ್ಯ ಜನತೆಯೊಡನಾಗಲೀ ಸಲೀಸಾಗಿ ಅವರು ಬೆರೆಯುವುದಿಲ್ಲ. ಶ್ರೀವಾದಿರಾಜರು ಇದಕ್ಕೆ ಅಪವಾದವೆಂಬಂತೆ, ಅಂದಿನ ಜನಜೀವನದಲ್ಲಿ ಬೆರೆತಿದ್ದಕ್ಕೆ ಹತ್ತಾರು ನಿದರ್ಶನಗಳನ್ನು ಕೊಡಬಹುದು. ಅಲ್ಲಲ್ಲಿ ನಡೆದಿದ್ದ ಮತೀಯ ಜಗಳಗಳನ್ನು ಅವರು ಬಗೆಹರಿಸಿದ್ದಾರೆ. ಹಲವು ಮತಪಂಥಗಳ ವರನ್ನು ದೈವಭಕ್ತಿಯತ್ತ ತಿರುಗಿಸಿದ್ದಾರೆ (ಉದಾಹರಣೆಗೆ ಅಕ್ಕಸಾಲಿಗರು, ಮಾಗಣೆಯವರು), ದ್ವಾರಕೆಯತ್ತಣಿನ ಹಲವು ಗುಜರಾತೀ ಮನೆತನಗಳವರು ಹಯಗ್ರೀವೋಪಾಸಕರಾದದ್ದು ಹೀಗೇನೆ.

ದೈವಭಕ್ತಿಯುಳ್ಳ ಯಾರೇ ಆಗಲಿ ವಾದಿರಾಜರು ಅವರನ್ನು ಪುರಸ್ಕರಿಸಿ ದ್ದಾರೆ. ಉಡುಪಿಯಲ್ಲಿ ಕನಕದಾಸರಿಗೆ ಮನ್ನಣೆ ಸಿಗುವಲ್ಲಿ, ತುಳು ಭಾಷಿಕರಿ ಗಾಗಿ ಹಾಡು ರಚಿಸುವಲ್ಲಿ ಅವರ ಈ ನಿಲುವನ್ನು ಗುರುತಿಸಬಲ್ಲೆವು. ಪ್ರಸಂಗ ಬಂದರೆ ಸಂಪ್ರದಾಯಗಳನ್ನು ಬದಿಗಿರಿಸುವುದಕ್ಕೂ ಸಿದ್ಧರು, ಮಾಧ್ವರು ಪೂಜೆ ಗೆಂದು ಬಳಸುವ ಘಂಟೆಯ ಮೇಲ್ಗಡೆ ಮುಖ್ಯ ಪ್ರಾಣನಿರಬೇಕು. ಸೋದೆಯ ಮಠದಲ್ಲಿ ಪೂಜೆಗೊಳ್ಳುತ್ತಿರುವ ಒಂದು ಘಂಟೆಯ ಮೇಲೆ ಮೂರ್ತಿ ಇದೆ– ಅದನ್ನು ಸೋದೆಯ ದೊರೆಯು ಭಕ್ತಿಭಾವದಿಂದ ಅರ್ಪಿಸಿದನೆಂಬ ಕಾರಣದಿಂದ.

ಶ್ರೀ ವಾದಿರಾಜರ ಬದುಕಿನಲ್ಲಿ ನಾಗ, ಭೂತಗಳಿಗೆ ಸಂಬಂಧಿಸಿದ ಹತ್ತಾರು ಘಟನೆಗಳು ಕಂಡುಬರುತ್ತವೆ, ಅವುಗಳ ಪವಾಡ ಸ್ವರೂಪವನ್ನು ಬದಿಗಿರಿಸಿ ದಲ್ಲಿ, ಅವು ಆದಿಪ್ರತೀಕಗಳಾಗಿ (Archetypes) ನಿಲ್ಲುತ್ತವೆ, ಈ ಹಿನ್ನೆಲೆ ಯಲ್ಲಿ ಕುಡುಮದ ಅಣ್ಣಪ್ಪ ಭೂತವು 'ಧರ್ಮಸ್ಥಳ'ವಾಗಿ ಪರಿವರ್ತನಗೊಂಡ ದ್ದನ್ನು ಗಮನಿಸಬೇಕು. ಅದರಂತೆ ಅವರ ಜೀವಿತ ಕಾಲದಲ್ಲಿ ಭೂತರಾಜರು ಪಡೆದ ಪ್ರಾಶಸ್ತ್ಯ. ಹೀಗೆ ವಾದಿರಾಜರು ತುಳುನಾಡಿನ ವಿಶಿಷ್ಟ ಆದಿ ಪ್ರತೀಕವೆನಿಸಿದ ಭೂತದ ಆರಾಧನೆಗೆ ವೈದಿಕ ಸ್ವರೂಪವನ್ನು ತಂದುಕೊಟ್ಟದ್ದು ವಿಶೇಷದ ಸಂಗತಿಯಾಗಿದೆ.

ಅದರಂತೆ ಅಶ್ವರೂಪೀ ಭಗವಂತನ ಆರಾಧನೆ. ವಾದಿರಾಜರ ಮೂಲ ಮಠದ ಪೂಜಾ ದೈವತ ಭೂವರಾಹ, ಆದರೆ ಅವರ ಉಪಾಸನೆಯು ಜ್ಞಾನದ

ಪ್ರತೀಕವಾದ ಹಯಗ್ರೀವ ದೇವರದ್ದು. ಇದಕ್ಕೆ ಸಂಬಂಧಿಸಿದ, ಅವರ ಜೀವನದಲ್ಲಿಯ ಐತಿಹ್ಯಗಳೇನೆ ಇರಲಿ. ಅವರು ಅಪಾತತಃ ಜ್ಞಾನೋಪಾಸಕರಾಗಿದ್ದರು. ಅವರು ತರುಣ ವಯದಿಂದಲೇ ಈ ದೈವತದ ಆರಾಧನೆಗೆ ತೊಡಗಿರಬೇಕು. ಆ ಚಿಕ್ಕ ವಯಸ್ಸಿನ ಕಾಲದಿಂದ ರಚಿಸಲಾರಂಭಿಸಿದ ಕೀರ್ತನೆಗಳ ಉದ್ದಕ್ಕೂ 'ಹಯವದನ' ಎಂಬ ಅಂಕಿತ ಇರುವುದು ಇದನ್ನು ಪುಷ್ಟೀಕರಿಸುತ್ತದೆ. ಶ್ರೀ ಹರಿಯ ವಿವಿಧ ಅವತಾರಗಳಲ್ಲಿ ಹಯಗ್ರೀವ ಅಷ್ಟೊಂದು ಪ್ರಚಲಿತವಿಲ್ಲ-ದಶಾವತಾರಗಳಿದ್ದಂತೆ. ನಮ್ಮ ನಾಡಿನ ಸಾಮಾನ್ಯ ಜನತೆಯಲ್ಲಿ ಈ ದೈವತ್ವವು ಜನಪ್ರಿಯವಾಗತೊಡಗಿದ್ದು, ವಾದಿರಾಜರು ಪುರಸ್ಕರಿಸಿದ ಕಾರಣದಿಂದಾಗಿ.

ಸಾಮಾನ್ಯವಾಗಿ ಪೀಠಾಧಿಪತಿಗಳು ಪಂಡಿತರು, ವೈದಿಕ ಧರ್ಮದ ಸಮಗ್ರ ದರ್ಶನವನ್ನು ಹೊಂದಿದವರು. ಇದರಲ್ಲಿ ವಾದಿರಾಜರ ಒಂದು ವೈಶಿಷ್ಟ್ಯವೆಂದರೆ ಯುಕ್ತಿಯುಕ್ತವಾಗಿ ವಿಷಯ ಮಂಡನ ಮಾಡುವ ಸಾಮರ್ಥ್ಯ. ಅವರು ಸುಮಾರು ಇಪ್ಪತ್ತೈದು ಗ್ರಂಥಗಳನ್ನು ಸಂಸ್ಕೃತದಲ್ಲಿ ರಚಿಸಿದ್ದಾರಷ್ಟೆ. ಅವುಗಳಲ್ಲಿ ತಮ್ಮ ಮಾಧ್ವತತ್ವ ಪ್ರಣಾಲಿಯು ಇತರ ಮತ ಪಂಥಗಳಿಗಿಂತ ಹೇಗೆ ಶ್ರೇಷ್ಠವೆಂದು ತೋರಿಸುವಲ್ಲಿ ಈ ಯುಕ್ತಿವಾದವು ಒಡೆದು ತೋರುತ್ತದೆ. ಅವರ ಒಂದು ಕೃತಿಯ ಹೆಸರು 'ಯುಕ್ತಿಮಲ್ಲಿಕಾ' ಎಂದೇ ಇದೆ.

ಪಾಂಡಿತ್ಯಕ್ಕೂ ಭಕ್ತಭಾವಕ್ಕೂ ಅಷ್ಟಕಷ್ಟೆ ಸಂಬಂಧ. ಶ್ರೀ ವಾದಿರಾಜರಲ್ಲಿ ಪಾಂಡಿತ್ಯದ ಜೊತೆಗೆ ಭಕ್ತಿಭಾವದ ಪರಾಕಾಷ್ಠೆಯನ್ನೇ ಕಾಣಬಲ್ಲೆವು. ತಿರುಪತಿಯ ಬೆಟ್ಟವನ್ನು ಹತ್ತುವಾಗ, ಅದರ ಕಲ್ಲಿನ ಮೆಟ್ಟಲುಗಳಲ್ಲಿಯೂ ಶ್ರೀ ವೆಂಕಟೇಶನ ಸಾನ್ನಿಧ್ಯವನ್ನು ಕಂಡರು. ತಮ್ಮ ಮೊಣಕಾಲು ಮೇಲೆಯೇ ನಡೆದು ಬೆಟ್ಟವನ್ನು ಏರಬೇಕೆನ್ನುವಷ್ಟು ಅದು ಆತ್ಯಂತಿಕವಾಗಿತ್ತು. ಅದರಂತೆ ವಿವಿಧ ದೇವತಾ ಮಂದಿರಗಳಿರಲಿ; ನದಿ, ವೃಕ್ಷಗಳೇ ಇರಲಿ ಅವರ ಭಕ್ತಿಭಾವ ಒಮ್ಮೆಲೇ ಉಕ್ಕೇರುತ್ತಿತ್ತೆಂದು ಕಾಣುತ್ತದೆ. ಅವರ 'ತೀರ್ಥಪ್ರಬಂಧ'ದ ಉದ್ದಕ್ಕೂ ನಾವು ಇದನ್ನು ಕಾಣುತ್ತೇವೆ. ಈ ಕೃತಿಯಲ್ಲಿಯ ಕಾವ್ಯಾತ್ಮಕ ಅಂಶಗಳಿಗೆ ಇದುವೆ ಪ್ರೇರಣೆಯಾಗಿದೆ.

ದೇವರನ್ನು ಜಗನ್ನಿಯಾಮಕ, ಸರ್ವಾಂತರ್ಯಾಮಿ, ಎಂದು ಬಗೆದಷ್ಟು ಭಕ್ತನು, ತಾನು ಎಷ್ಟೇ ಪಂಡಿತ ಅಥವಾ ಕರ್ತೃತ್ವಶಾಲಿ ಇರಲಿ, ಕುಗ್ಗಿ ಬಿಡು

ವನು. ಭಕ್ತಿಭಾವವು ಅತ್ಯಂತಿಕವಾದ ಹಾಗೆಲ್ಲ ವಿನೀತಭಾವದಿಂದ ದೇವನ ದಾಸಾನುದಾಸನಾಗುತ್ತಾನೆ. ತನ್ನನ್ನು ಸಂಪೂರ್ಣವಾಗಿ ಸಮರ್ಪಿಸಿಕೊಳ್ಳುತ್ತಲೇ ಇರುತ್ತಾನೆ. ಶ್ರೀ ವಾದಿರಾಜರು ಭಗವಂತನ ಧ್ಯಾನದಲ್ಲಿ ವಿಶೇಷ ಸಾರ್ಥಕ್ಯ ವನ್ನು ಪಡೆದಿದ್ದರೂ, ತಮ್ಮ ಇಳಿವಯದಲ್ಲಿ 'ವೃದ್ಧನಾದೆನು, ಪಲ್ಲುಗಳೆಲ್ಲ ಬಿದ್ದವು. ಕಣ್ಣು ಕಾಣಬರದು. ಎದ್ದು ನಿಲ್ಲಲಾರೆನಯ್ಯ, ಉದ್ಧರಿಸೋ ಹಯ ವದನಾ' ಎಂದು ಆರ್ತಸ್ವರದಿಂದ ಬೇಡಿಕೊಳ್ಳುತ್ತಾರೆ.

ಪಾಂಡಿತ್ಯಕ್ಕೆ ಅಷ್ಟೊಂದು ಹೊಂದಿಕೆಯಾಗದ ಇನ್ನೊಂದು ಅಂಶವೆಂದರೆ ಸರಸ ಕವಿತ್ವ. ಅಷ್ಟಾದಶ ವರ್ಣನೆಗಳಿಂದ ಕೂಡಿದ, ಅಲಂಕಾರಯುಕ್ತವಾದ ಪಾರಂಪರಿಕ ಕಾವ್ಯವನ್ನು ಅದರಂತೆ ಕೀರ್ತನೆಗಳನ್ನು ರಚಿಸುವಲ್ಲಿ ಅವರು ಸಮರ್ಥರಿದ್ದರು. ಇದಕ್ಕೆ ಮೂಲತಃ ಅವರಲ್ಲಿದ್ದ ಭಕ್ತಿಭಾವ: ಅದರಂತೆ ಭಗವಂತನ ವಿವಿಧ ರೀತಿಯಲ್ಲಿ ಸಾಕ್ಷಾತ್ಕಾರಗಳು ಪ್ರೇರಣೆಯನ್ನು ಒದಗಿಸಿದ್ದವು. ವಿಷ್ಣುವಿನ ದಶಾವತಾರಗಳು ಈ ಕವಿತ್ವ ರಚನೆಯಲ್ಲಿ ಅವರಿಗೆ ತುಂಬಾ ಅನು ಕೂಲವಾಗಿ ಪರಿಣಮಿಸಿದವು. ಅವರ ಅನೇಕ ಕನ್ನಡ ಕೀರ್ತನೆಗಳಲ್ಲಿ ಅದು ವ್ಯಕ್ತ ವಾಗಿದೆ. ಆಶ್ಚರ್ಯವೆಂದರೆ ಅವರು ರಚಿಸಿದ ಇಪ್ಪತ್ತಕಿಂತ ಹೆಚ್ಚಿನ ಸಂಸ್ಕೃತ ಸ್ತೋತ್ರಗಳಲ್ಲಿಯೂ ದಾಸಸಾಹಿತ್ಯದ ಭಾವ ನಿರ್ಭರವನ್ನೇ ಕಾಣುತ್ತೇವೆ. ಇಲ್ಲೆಲ್ಲ ಎದ್ದು ತೋರುವ ಅಂಶವೆಂದರೆ ಪದಮೈತ್ರಿ, ಅದರಿಂದ ಅವರ ಸಂಸ್ಕೃತದ ಶ್ಲೋಕಗಳೂ ಸಂಗೀತದ ನಾಡಿಯನ್ನು ಮಿಡಿಯುತ್ತಿವೆ. ಅಶ್ವಧಾಟಿ ಯನ್ನು ಹೆಚ್ಚು ಪ್ರಚುರಗೊಳಿಸಿದವರು ವಾದಿರಾಜರೇ. ಅವರು ಒಂದೆಡೆ ತಂದ 'ಗುಂಡಕ್ರಿಯಾ' ಎಂಬ ರಾಗದ ಹೆಸರು ಸಂಗೀತಗಾರರಿಗೇನೆ ಪರಿಚಿತವಲ್ಲದ್ದು. ಅನುಷ್ಟುಪ್‌ದಂತಹ ನೀರಸವಾದ ಪದ್ಯಪ್ರಕಾರದಲ್ಲಿ ಸಹ ಅವರು ಲಾಲಿತ್ಯವನ್ನು ಸಾಧಿಸಿದ್ದಾರೆ. ಇದನ್ನು ಗಮನಿಸಿಯೇ ಒಬ್ಬರು ಅವರನ್ನು 'ಸಂಗೀತಲೋಲ ಯತಿ ಪುಂಗವ' ಎಂದು ಕರೆದಿದ್ದಾರೆ.

ಶ್ರೀ ವಾದಿರಾಜರ ಶಿಷ್ಯನೊಬ್ಬ ಅವರ ಚರಿತ್ರೆಯನ್ನು ಬರೆದನಂತೆ. ಅವ ರಿಂದ ಶಾಬಾಸ್‌ಗಿರಿಯನ್ನು ಪಡೆಯಲು. ಅದನ್ನು ಓದಬೇಕಾಗಿ ಅದರನ್ನು ಕೇಳಿಕೊಂಡನು. ಆಗ ಅವರು ನಸು ನಕ್ಕು 'ಆಗಲಿ' ಎಂದರು, ಓದಲೇ

ಇಲ್ಲ, ಆವನೋ ಮೇಲಿಂದ ಮೇಲೆ ಅಭಿಪ್ರಾಯಕ್ಕಾಗಿ ಕೇಳುತಲಿದ್ದ ಒಮ್ಮೆ ಅವರು ನದಿಯೊಂದನ್ನು ದಾಟಲೆಂದು ನಾವೆಯಲ್ಲಿ ಕುಳಿತಾಗ ಓದತೊಡಗಿದರು. 'ಇದು ಚೆನ್ನಾಗಿಲ್ಲ; ಇದು ಸರಿಯಾಗಿ ಬಂದಿಲ್ಲ' ಎನ್ನುತ್ತ ಒಂದೊಂದೇ ಓಲೆಗಳನ್ನು ನೀರಿಗೆಸೆದರು ಕೊನೆಯಲ್ಲಿ—

ಸಚಾಸ್ತ್ರನಿಷ್ಠಂ ಭುವಿರಾಜಮಾನಮ್
ವಾದೀಭಸಿಂಹಂ ಸುಮತ ಪ್ರತಿಷ್ಠಿತಮ್
ಏವಂ ಮುನೀಂದ್ರಂ ಕವಿವಾದಿರಾಜಮ್

ಎಂಬ ಶ್ಲೋಕವಿರುವ ಓಲೆಯನ್ನು ಉಳಿಸಿಕೊಂಡರಂತೆ,

ಕವಿ ವಾದಿರಾಜಂ! ಅವರ ಈ ಕವಿತ್ವದ ಲಕ್ಷಣಗಳನ್ನು ಹಲವಾರು ಜನ ಹೀಗೆ ವಿವರಿಸಿದ್ದಾರೆ.

–ಸವಿನೋದಂ ಸಾಟ್ಟಹಾಸಂ ಸಸ್ಮಿತಂ ಸುಸ್ವರಾನ್ವಿತಂ ವಾದಿರಾಜ ವಚೋಮೃತಂ
–ಮೃದು ಸರಸಕವೇಃಪುರಃ ಕಿಮೊಡ್ಯಾ ಕಠಿನ ಪದಪ್ರಿಯ ಕಾವ್ಯನಾರಲೀಲಾ.

ಒಟ್ಟಿನಲ್ಲಿ ನೋಡಿದಾಗ ಅವರದು ಸರಸ ಪ್ರೌಢ ಕವಿತ್ವ ಎಂದೆನ್ನಬಹುದು. ಈ ಪ್ರೌಢತ್ವದ ಒಂದು ಕಾರಣವೆಂದರೆ ಅವರು ತಮ್ಮ ಕಾವ್ಯಗಳಲ್ಲಿ ಬಹ್ವಂಶವಾಗಿ ತಂದಿರುವ ಶ್ಲೇಷೆ.

## ಶ್ರೀ ವಾದಿರಾಜರ ಲೌಕಿಕ ಕೃತಿಗಳು

ವಾದಿರಾಜರ ಕಾವ್ಯ ಸೌಂದರ್ಯವನ್ನು ತೋರಿಸಿಕೊಡುವುದು ಈ ಉಪನ್ಯಾಸದ ಉದ್ದೇಶವಷ್ಟೆ. ನಾವು ಅದನ್ನು ಅವರ ಲೌಕಿಕ ಕಾವ್ಯಗಳಲ್ಲಿ ಕಾಣಬೇಕು. ಲೌಕಿಕ ಕಾವ್ಯ ಅಂದರೇನು ? ಅವರು ಸ್ವಮತ ಪ್ರತಿಪಾದನೆಯ ಅನೇಕ ಗ್ರಂಥಗಳನ್ನು ರಚಿಸಿದ್ದು ಅವನ್ನು ಶಾಸ್ತ್ರ ಗ್ರಂಥಗಳೆಂದು ಕರೆಯುವಾ. ಯಾವವು ಶಾಸ್ತ್ರ ಗ್ರಂಥಗಳಲ್ಲವೂ ಅವು ಲೌಕಿಕ ಕೃತಿಗಳು, ಪ್ರಸ್ತುತ 'ತೀರ್ಥ ಪ್ರಬಂಧ' ಹಾಗೂ 'ರುಕ್ಮಿಣೀಶ ವಿಜಯ' ಇವು ಲೌಕಿಕ ಕಾವ್ಯದ ಸದರಿನಲ್ಲಿ ಬರುತ್ತವೆ.

ಹಾಗೆಂದು ಪೂರ್ಣತಃ ಲೌಕಿಕವಲ್ಲ. ಅವುಗಳಲ್ಲಿ ಪಂಪನು ಹೇಳಿದ 'ಕಾವ್ಯ ಧರ್ಮಮುಂ, ಧರ್ಮಮುಂ ಅರಿವುದು'. ಯಾವ ಒಂದು ಮಾನದಂಡದಿಂದ ನಾವು ವಚನ ಸಾಹಿತ್ಯವನ್ನು, ಹರಿಹರನ ರಗಳೆಗಳನ್ನು ಅಥವಾ ದಾಸರ ಹಾಡುಗಳನ್ನು ಸಾಹಿತ್ತಿಕವಾಗಿ ಪರಿಗಣಿಸುತ್ತೇವೆಯೊ ಅದೇ ಮಾನದಂಡದಿಂದ ವಾದಿರಾಜರ ಇವೆರಡು ಕೃತಿಗಳನ್ನು ಸಾಹಿತ್ಯಗುಣ ಪ್ರಧಾನವೆಂದು ಗಣಿಸತಕ್ಕದ್ದು.*

ಇನ್ನು ಅವರ ಕೀರ್ತನೆಗಳಲ್ಲಿ, ಅದರಂತೆ ಕಥನಾತ್ಮಕ ಕೃತಿಗಳಲ್ಲಿ ಕಾವ್ಯಗುಣ ಸಮೃದ್ಧವಾಗಿಯೇ ಇದೆ. ಈ ಕನ್ನಡ ಹಾಡುಗಳ ಕುರಿತು ಮೈಸೂರು ವಿಶ್ವವಿದ್ಯಾಲಯದ ಪ್ರಸಾರಾಂಗವು ಪ್ರಕಟಿಸಿದ ಶ್ರೀ ವಾದಿರಾಜರ ಎರಡು ಸಂಗ್ರಹಗಳಲ್ಲಿ ವಿವರಣೆ ಬಂದಿರುವುದರಿಂದ ಅವುಗಳಲ್ಲಿನ ಕಾವ್ಯ ಸ್ವಾರಸ್ಯದ ಬಗ್ಗೆ ಇಲ್ಲಿ ಮತ್ತೆ ಹೇಳಬೇಕಾದದ್ದಿಲ್ಲ. ಪ್ರಕೃತ 'ತೀರ್ಥ ಪ್ರಬಂಧ' ವೊಂದನ್ನು ಆ ದೃಷ್ಟಿಯಿಂದ ಪರಿಶೀಲಿಸೋಣ.

---

* ಲೌಕಿಕವೆನ್ನಬೇಕಾದ ಅವರ ಇನ್ನೊಂದು ಕೃತಿಯಿದೆ. 'ಲಕ್ಷಾಲಂಕಾರ' ಎಂದು ಅದರ ಹೆಸರು ಅದರಲ್ಲಿ ಮಹಾಭಾರತದ ಅನೇಕ ಶಬ್ದಗಳಿಗೆ ಅರ್ಥವನ್ನು ಕೊಡಲಾಗಿದೆ. ಉದಾ: ಮಾಮಕಾ ವಾಭೀಷ್ಮನೇತ್ರಾ: ಸಮೀಕೆ ೧೧ ಇತ್ಯತ:, ಸಮೀಕೆ- ಯುದ್ಧೇ, ಸಮೀಕಂ ಸಾಂಪರಾಯಿಕಂ- ಇತ್ಯಮರ:. ಆದರೆ ಇದು ಕಾವ್ಯವೇನಲ್ಲ; ವ್ಯಾಖ್ಯಾನ ರೂಪದ ಕೃತಿಯಾಗಿದೆ.

# ೨. 'ತೀರ್ಥ ಪ್ರಬಂಧ'ದ ಸ್ಥೂಲ ಪರಿಚಯ

ತೀರ್ಥ ಪ್ರಬಂಧವು ಭರತ ಖಂಡದ ನದಿ-ಸರೋವರಗಳನ್ನು, ತೀರ್ಥ ಕ್ಷೇತ್ರಗಳನ್ನು ಹಾಗೂ ಅಲ್ಲಿರುವ ದೇವ-ದೇವತೆಗಳನ್ನು ವರ್ಣಿಸುವ ಗ್ರಂಥ. ಸಂಸ್ಕೃತದಲ್ಲಿ ಇದುವೆ ಮೊತ್ತ ಮೊದಲಿನ ಪ್ರವಾಸ ಸಾಹಿತ್ಯವೆಂದು ತೋರುತ್ತದೆ. (ಅನುಬಂಧ ೨ ನೋಡಿರಿ). ಶ್ರೀ ವಾದಿರಾಜರು ಆಸೇತು ಹಿಮಾಚಲವನ್ನು ಮೂರು ಬಾರಿ ಸಂಚರಿಸಿದ್ದ ಅಂಶವನ್ನು ಈ ಮೊದಲು ಪ್ರಸ್ತಾಪಿಸಿದ್ದೇನೆ. ಇದರಲ್ಲಿ ಸೋಂದಾ ಕ್ಷೇತ್ರದ ವರ್ಣನೆಯೂ ಇರುವುದರಿಂದ, ಅವರು ಈ 'ಪ್ರಬಂಧ'ವನ್ನು ತಮ್ಮ ವಯಸ್ಸಿನ ಉತ್ತರಾರ್ಧದಲ್ಲಿ ರಚಿಸಿದ್ದಾರೆನ್ನಬಹುದು. ಅವರು ಸೃಷ್ಟಿಯ ಪ್ರತಿಯೊಂದು ಅಂಗದಲ್ಲಿಯೂ ಭಗವಂತನನ್ನು ಕಂಡವರಾದ್ದರಿಂದ ಮತ್ತು ಆ ಕ್ಷೇತ್ರಗಳಲ್ಲಿರುವ ದೇವ ದೇವತೆಗಳನ್ನು ಆರಾಧಿಸಿದವರಾದ್ದರಿಂದ ಈ ಕೃತಿಯನ್ನು ರಚಿಸಲುದ್ಯುಕ್ತರಾದರು. ಅರ್ಥಾತ್ ಭಕ್ತಿ ಭಾವವೇ ಇದಕ್ಕೆ ಪ್ರೇರಣೆಯನ್ನು ಒದಗಿಸಿದೆ.

ಇದರಲ್ಲಿ ವರ್ಣಿತವಾದ ಕ್ಷೇತ್ರಾದಿಗಳನ್ನು ಅವರು ಸ್ವತಃ ಕಂಡವರು. ಸಮುದ್ರವನ್ನು ಕಣ್ಣಾರೆ ನೋಡಿದ್ದರೂ, ಅಷ್ಟಾದಶ ವರ್ಣನೆಯ ನಿಯಮಾನುಸಾರ, ಅದನ್ನು ವರ್ಣಿಸ ಹೊರಟ ಕವಿಗಳ ಬಗ್ಗೆ ಇಲ್ಲಿ ಇಲ್ಲ. ಹಾಗೆಂದು ವಾದಿರಾಜರು ತಾವು ನೋಡಿದ್ದೆಲ್ಲವನ್ನು ವರ್ಣಿಸಿಲ್ಲ. ಅವರು ಹೇಳಬಹುದಾಗಿದ್ದ, ಆದರೆ ವರ್ಣಿಸದೇ ಹೋದ ಕೆಲವು ಕ್ಷೇತ್ರಗಳು ಒಡೆದು ತೋರುತ್ತವೆ. conspicuous by their absence ಎಂದ ಹಾಗೆ.

ಉದಾ : ಕೇದಾರ, ಹರಿದ್ವಾರಗಳ ಪ್ರಸ್ತಾಪವಿಲ್ಲ. ಅದರಂತೆ ದಕ್ಷಿಣ ಭಾರತದ ಬೇಲೂರು, ತೋತಾದ್ರಿಗಳ ವರ್ಣನೆಯೂ ಬರಬಹುದಿತ್ತು. ಅದೇಕೋ ಬಂದಿಲ್ಲ.

ಒಟ್ಟಿಗೆ ೨೩೫ ಶ್ಲೋಕಗಳುಳ್ಳ ಈ ಕೃತಿಯಲ್ಲಿ ಪಶ್ಚಿಮ, ಉತ್ತರ, ಪೂರ್ವ ಹಾಗೂ ದಕ್ಷಿಣ ಪ್ರಬಂಧಗಳೆಂದು ನಾಲ್ಕು ಭಾಗಗಳಿವೆ. ಪಶ್ಚಿಮ ಪ್ರಬಂಧದಲ್ಲಿ

ಅವರು ಮೇಲಿಂದ ಮೇಲೆ ಸಂಚರಿಸಿದ್ದ ದ. ಕ. ಜಿಲ್ಲೆಯ ನದಿ, ಕ್ಷೇತ್ರಗಳು ವರ್ಣಿತವಾಗಿವೆ. ಅವೇ ಹೆಚ್ಚಿನ ಸಂಖ್ಯೆಯಲ್ಲಿವೆ. ಭೌಗೋಲಿಕ ಕ್ರಮದಲ್ಲಿರುವ ಈ ನಾಲ್ಕು ಪ್ರಬಂಧಗಳಲ್ಲಿ ಬಂದಿರುವ ವರ್ಣನಾಂಶಗಳನ್ನು (ಅ) ನದಿ-ಸರೋವರಗಳು (ಆ) ಕ್ಷೇತ್ರ ಸ್ಥಳಗಳು ಮತ್ತು (ಇ) ಅಲ್ಲಿಯ ದೇವ-ದೇವತೆಗಳು ಎಂಬುದಾಗಿ ವಿಭಾಗಿಸಬಹುದು. ಮತ್ತು ಈ ವಿಭಾಗ ಕ್ರಮದಲ್ಲಿಯೇ ಅವರ ಪ್ರತಿಭಾವಿಲಸನವನ್ನು ಪರಿಶೀಲಿಸೋಣ.*

---

* ಇಲ್ಲಿಯ ಹಲವು ದೇವತೆಗಳ, ಕ್ಷೇತ್ರಗಳ ವರ್ಣನೆ ಅವರ ಕೀರ್ತನೆಗಳಲ್ಲಿಯೂ ಸೊಗಸಾಗಿ ಮೂಡಿ ಬಂದಿದೆ. ಉದಾ :ಗೆ ಗೋದಾವರಿ ನದಿ, ಪ್ರಯೋಗದ ವೇಣಿ ಮಾಧವ.

# ೩. ನದಿ ಸಂಗಮಗಳು

ಇಲ್ಲಿ ವರ್ಣಿತವಾಗಿರುವ ಸುಮಾರು ಮೂವತ್ತು ನದಿಗಳಲ್ಲಿ ಏಳೆಂಟು ಕರ್ನಾಟಕದ್ದೇ ಆಗಿವೆ. ಅವೆಂದರೆ ನೇತ್ರಾವತಿ, ಕುಮಾರಧಾರಾ, ಪಯಸ್ವಿನೀ, ಸುವರ್ಣಾ, ವರದಾ, ಧರ್ಮಗಂಗಾ ಹಾಗೂ ಶಾಲ್ಮಲೀ ನದಿಗಳು. ಬೇರೆ ರಾಜ್ಯಗಳಲ್ಲಿಯೂ ಹರಿಯುತ್ತಿರುವ ನಮ್ಮ ಕಾವೇರಿ, ತುಂಗಭದ್ರಾ, ಮತ್ತು ಕೃಷ್ಣಾ ನದಿಗಳೂ ಇಲ್ಲಿ ವರ್ಣಿತವಾಗಿವೆ.

ಯಾವುದೇ ನದಿ ಇರಲಿ, ಅದರ ಪವಿತ್ರತೆಯೇ ಮುಖ್ಯ ಗುರಿಯಾಗಿರುತ್ತದೆ. ಈ ಪಾವಿತ್ರ್ಯಕ್ಕೆ ಯಾವುದೊಂದು ಪುರಾಣದ ಕಥೆ ಇಲ್ಲವೆ ಅಲ್ಲಿಯ ದೇವತಾ ಸಾನ್ನಿಧ್ಯವು ಹಿನ್ನೆಲೆಯಾಗಿ ಇರುತ್ತದೆ. ಈ ಹಿನ್ನೆಲೆಯನ್ನು ಕೊಡುವಲ್ಲಿ ಅವರ ಕಲ್ಪಕತೆ ಸೇರಿಕೊಂಡು ಆ ವರ್ಣನೆಗಳು ಮುದವನ್ನು ನೀಡುತ್ತವೆ. ಅಂಥ ಕೆಲವನ್ನು ಈಗ ವಿವರಿಸುವೆ.

**ದಕ್ಷಿಣ ಕನ್ನಡ ಜಿಲ್ಲೆಯ ನದಿಗಳು**

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ, ದಕ್ಷಿಣೋತ್ತರವಾಗಿ ಹಬ್ಬಿರುವ ವರಾಹ ಪರ್ವತವು (ಈಗಿನ ಕುದುರೆಮುಖ) ಸಾಕಷ್ಟು ಪರಿಚಿತವಾದದ್ದು. ಅದು ಮೂರು ನದಿಗಳ ಉಗಮಸ್ಥಾನ : ನೇತ್ರಾವತಿ, ಕುಮಾರಧಾರಾ ಮತ್ತು ತುಂಗಾ. ಇವುಗಳಲ್ಲಿ ನೇತ್ರಾವತಿಯು ದ. ಕ. ಜಿಲ್ಲೆಯ ಅತಿ ದೊಡ್ಡ ನದಿ. ವರಾಹ ಪರ್ವತದ ಕಣ್ಣಿನಂತಿರುವ ಭಾಗದಿಂದ ಹರಿದು ಬರುತ್ತಿದೆಯೆಂದು ಅದಕ್ಕೆ 'ನೇತ್ರಾವತಿ' ಎಂಬ ಹೆಸರು ಬಂದಿರಬೇಕು. ನೇತ್ರದಿಂದ ಹೊರಟ ನೀರು–ಕಣ್ಣೀರು ! ಹೆಚ್ಚಾಗಿ ದುಃಖದ ಕಾರಣದಿಂದ ಹೊರಹೊಮ್ಮುತ್ತದಲ್ಲವೆ. ಆದರೆ ವರಾಹದೇವರ ಕಣ್ಣಿನಿಂದ ಹೊರಟ ಈ ನೀರು ಮಾತ್ರ ಆನಂದಾಶ್ರು. ಅದಕ್ಕೆ ವಾದಿರಾಜರು ಕೊಡುವ ಕಾರಣ ಇಂತಿದೆ : ವರಾಹ ನಯನದ ಈ ಧಾರೆಯಲ್ಲಿ ಸ್ನಾನ ಮಾಡಿದವರ ಭಕ್ತಿ ಭಾವವೆಂಬ ಲತಿಕೆಯನ್ನು ಇದು ಬೆಳೆಸುವುದು, ದುಃಖದ ಬಿಸಿನೀರಿನಿಂದ ಏನೂ ಬೆಳೆಯುವುದಿಲ್ಲ. ಆದ್ದರಿಂದ ಇದು ಆನಂದ ಧಾರೆಯೇ !

ವರಾಹನಯನಾಂದ ಧಾರಾ ನೇತ್ರಾವತೀ ಸರಿತ್
ಶುಷ್ಕಾಂ ತದ್ಭಕ್ತಿ ಲತಿಕಾಂ ಪುಷ್ಣಾತಿ ಕಥಮನ್ಯಥಾ*
(ಪಶ್ಚಿಮ ಪ್ರ.೩೨)

ಕುಮಾರಧಾರಾ ನದಿಯು ಉಪ್ಪಿನಂಗಡಿಯ ಬಳಿ ನೇತ್ರಾವತಿಯನ್ನು ಕೂಡಿಕೊಳ್ಳುತ್ತದೆ. ಈ ಸಂಗಮಕ್ಕೆ ಹೊಂದಿ ಸಾವಿರ ಲಿಂಗಗಳುಳ್ಳ ಒಂದು ಈಶ್ವರನ ದೇವಸ್ಥಾನವಿದೆ. ಈಶ್ವರನ-ವಿಶ್ವನಾಥನ ಮೂಲ ವಾಸಸ್ಥಳ, ಕಾಶಿ. ಗಂಗಾನದಿಯ ತೀರವೇ ಅವನಿಗೆ ಇಷ್ಟವಾದದ್ದು. ಆದರೆ ಈಗ ಅವನು ಈ ನದೀದ್ವಯಕ್ಕೆ ಬಂದು ಬಿಟ್ಟಿದ್ದಾನೆ– ಅದೂ ಸಹಸ್ರರೂಪದಲ್ಲಿ ! ಆದ್ದರಿಂದ ಇದು ಕಾಶಿಗಿಂತಲೂ ಹೆಚ್ಚಿನ ಪವಿತ್ರತಮವಾದ ಸಂಗಮ–ಎಂದೆನ್ನುತ್ತಾರೆ ವಾದಿರಾಜರು.

ವರಾಹ ಪರ್ವತದಿಂದ ಹುಟ್ಟಿದ ಇನ್ನೊಂದು ನದಿ ತುಂಗಾ. ಪರ್ವತದ ಕೋರೆಯಂತೆ ಕಾಣುವ ಸ್ಥಳದಲ್ಲಿ ಇದರ ಉಗಮ. ಆದ್ದರಿಂದ ವರಾಹದೇವರ ಕೋರೆ ಹಲ್ಲಿನಿಂದ ಈ ನದಿಯು ಹುಟ್ಟಿದುದೆಂದು ಪುರಾಣೋಕ್ತ ಪ್ರತೀತಿ. ಭಗವಂತನು ಹೀಗೆ ತನ್ನ ಬಾಯಿಯಲ್ಲಿ ಈ ನೀರನ್ನು ಹಿಡಿದಿರಬೇಕಾದರೆ ಅದು ರುಚಿಯಾಗಿರಬೇಕಾಗುವುದು. ಈ ಅಂಶ ನಮಗೂ ಗೊತ್ತು. ಅಂತೆಯೇ 'ಗಂಗಾ ಸ್ನಾನ, ತುಂಗಾ ಪಾನ' ಎಂಬ ಮಾತು ಈ ಜನರಲ್ಲಿ ಪ್ರಚಲಿತವಿದೆ. ಆದ್ದರಿಂದ ಅದರ ರುಚಿ ನೋಡಲೆಂದೇ ವರಾಹರೂಪೀ ಭಗವಂತನು ಅದನ್ನು ತನ್ನ ಬಾಯಲ್ಲಿ ಹಿಡಿದಿರುವನೆಂದು ವಾದಿರಾಜರು ಗ್ರಹಿಸಿದ್ದಾರೆ. ಇಲ್ಲವಾದರೆ, ನದೀ ಪ್ರವಾಹವನ್ನು (ಉದಾ : ಗಂಗಾನದಿ) ಸಾಮಾನ್ಯವಾಗಿ ಪಾದದಲ್ಲಿ ಧರಿಸುವ ವಿಷ್ಣುವು ಇದನ್ನು ಬಾಯಲ್ಲಿ ಏಕೆ ಹಿಡಿಯುತ್ತಿದ್ದ ? ಎಂದೂ ಕೇಳುತ್ತಾರೆ. ಆ ಪದ್ಯದ ಅನ್ವಯವಿದು :

'ಹೇ ತುಂಗ (ಭದ್ರೇ) ತ್ವಮ ತಟಿನೀಷು
ನೂನಂ ಸ್ವಾದೂದಕ ಸಂಕುಲಾ ಅಸಿ ನೋ ಚೇತ್
ತೀರ್ಥಪದಃ ಅಸೌತ್ವಾಮ್ ಏವ ದಂಷ್ಟ್ರಯೋ
ಕಸ್ಮಾತ್ ಧತ್ತೇ' (ಪೂ. ಪ್ರ. ೧೨)

* ಇದು ಅರ್ಥಾಪತ್ತಿ ಎಂಬ ಅಲಂಕಾರಕ್ಕೆ ಉತ್ತಮ ಉದಾಹರಣೆಯಾಗಬಲ್ಲದು.

## ಕೃಷ್ಣಾ ನದಿ

ತುಂಗಭದ್ರೆಯ ಅನಂತರ ನಮಗೆ ಹೆಚ್ಚು ಆತ್ಮೀಯವಾದ ನದಿ ಎಂದರೆ ಕೃಷ್ಣೆಯೇ. ವಾದಿರಾಜರು ಅದನ್ನು ನಾಲ್ಕು ಶ್ಲೋಕಗಳಲ್ಲಿ ಮನದುಂಬಿ ವರ್ಣಿಸಿದ್ದಾರೆ. ಶ್ರೀ ಕೃಷ್ಣವಾಚಿಯಾದ ಅದರ ಹೆಸರೇ ಅವರಿಗೆ ಅಪ್ಯಾಯಮಾನವಾದದ್ದು. ತನ್ನ ದರ್ಶನ ಮಾತ್ರದಿಂದಲೇ ಅವಳು ಕೋಟಿ ಜನ್ಮಕೃತ ದುಷ್ಕರ್ಮಗಳನ್ನು ನಾಶಮಾಡಬಲ್ಲಳೆಂಬ ನಿಷ್ಠೆ ಅವರದು.

ಗುರು ಕನ್ಯಾರಾಶಿಗೆ ಹೋದಾಗ ಈ ಕೃಷ್ಣಾ ನದಿಯಲ್ಲಿ ಭಾಗೀರಥಿಯ ಸನ್ನಿಧಾನವಿರುವುದು; ಆಗ ಇಲ್ಲಿ ಸ್ನಾನ ಮಾಡಿದರೆ ವಿಶೇಷವಾದ ಪುಣ್ಯ ಸಾಧನೆ ಎಂಬ ನಂಬಿಕೆ ಜನರಲ್ಲಿ ಅನೂಚಾನವಾಗಿ ನಡೆದುಕೊಂಡು ಬಂದಿದೆ.

ಗುರುಂ ಕನ್ಯಾಗತ ಧನ್ಯಾ ಯಾ ಪುರಸ್ಕೃತ್ಯ ಸೇವ್ಯಸೇ
ಶ್ರೀಕೃಷ್ಣವೇಣಿ ಪಾಪಾನಿ ಸಾತ್ವಮ್ ಪುಣ್ಯಯಸಿ ಧ್ರುವಮ್
(ಉ. ಪ್ರ. ೨)

ಇಲ್ಲಿ ಬರುವ 'ಗುರು' ಮತ್ತು 'ಕನ್ಯಾ' ಈ ಶಬ್ದಗಳನ್ನು ಇನ್ನೊಂದು ವಾಚ್ಯಾರ್ಥದಲ್ಲಿ ಬಳಸಿ ಆ ಸಂದರ್ಭಕ್ಕೆ ಸೊಗಸನ್ನು ಮೂಡಿಸಿದ್ದಾರೆ. ಅದು ಹೀಗಿದೆ :

ಗುರು– ಎಂದರೆ ದೇವತೆಗಳ ಪರಮ ಗುರು : ಬೃಹಸ್ಪತಿ. ಅವರು 'ಕನ್ಯಾಗತ' ಎಂದರೆ ಕನ್ಯೆಯ ಹಿಂದೆ ಹೋಗುವುದು. ಶಾಂತಂ ಪಾಪಂ ಆದರೂ ಅಡ್ಡಿಯಿಲ್ಲ. ಯಾಕೆಂದರೆ ಪರಮ ಪಾವನೆಯಾದ ಕೃಷ್ಣೆಯು ಎಂಥ ಪಾಪ ಮಾಡಿದವರನ್ನೂ ಬರಮಾಡಿಕೊಂಡು, ಅವರ ಪಟ್ಟಿಗೆ ಪುಣ್ಯದಾಯಿನಿಯೇ ಆಗುತ್ತಾಳೆ. ಹೀಗೆ ತಪ್ಪು ಮಾಡಿದವರು, ಗುರು ಸ್ಥಾನದಲ್ಲಿಯೇ ಇದ್ದಿರಲಿ, ಈ ಕೃಷ್ಣೆಯು ಉದ್ಧರಿಸುವಳು– ಎಂದು ಇಲ್ಲಿ ಕಲ್ಪಿಸಿದ್ದಾಗಿದೆ.

ಈ ನದಿಗೆ ಕೃಷ್ಣವೇಣಿ– ಎಂದೂ ಹೆಸರಿದೆ. ಏಕೆಂದರೆ ಅದು ಹುಟ್ಟುವ ಸ್ಥಳದಲ್ಲಿ 'ವೇಣಿ' ಎಂಬ ಚಿಕ್ಕ ನದಿಯೂ ಸೇರಿಕೊಳ್ಳುತ್ತದೆ. ಆದರೆ ಅವೆರಡೂ

ಪದಗಳು ಸೇರಿದಾಗ 'ಕೃಷ್ಣವೇಣಿ' ಎಂದು ಆಗಬೇಕಿತ್ತಲ್ಲವೆ. ಆದರೆ ಈ ಕೂಡು ನುಡಿಯಲ್ಲಿ 'ಕೃಷ್ಣ' ಎಂದು ಬಂದಿರುವುದು ಅದರ ಪುಂಭಾವವನ್ನು ತೋರಿಸುವುದು. ಅರ್ಥಾತ್ ಶ್ರೀ ಕೃಷ್ಣನ ಸಾನ್ನಿಧ್ಯ ಅಲ್ಲಿದೆ ಎಂದಾಯಿತು. ಇಂಥ ಮಹಿಮಾನ್ವಿತೆಯಾದ ಕೃಷ್ಣೆಯು ನನಗೆ ಶ್ರೀ ಕೃಷ್ಣನ ಚರಣಗಳಲ್ಲಿ ಭಕ್ತಿಯನ್ನು ಮೂಡಿಸಲಿ ಎಂಬುದಾಗಿ ವಾದಿರಾಜರು ಕೋರಿದ್ದಾರೆ.

## ಗೋದಾವರಿ

ಕೃಷ್ಣಾನದಿಯ ವಿಚಾರದಲ್ಲಿ ಗುರು ಕನ್ಯಾರಾಶಿಗೆ ಹೋಗುವುದಾದರೆ ಇಲ್ಲಿ ಗುರು ಸಿಂಹರಾಶಿಯನ್ನು ಪ್ರವೇಶಿಸುವ ಸಂದರ್ಭವಿದೆ. ಆಗ ಸ್ನಾನ ಮಾಡಿದಲ್ಲಿ ಅಖಂಡ ಪುಣ್ಯಪ್ರಾಪ್ತಿ ಎಂಬುದು ಭಾವುಕರ ನಂಬುಗೆ. ಶ್ರೀ ವಾದಿರಾಜರು ಇಲ್ಲಿ ಬೇರೆಯೇ ಆದ ಕಲ್ಪನೆಯನ್ನು ಮೂಡಿಸಿದ್ದಾರೆ. ಯಾವಾಗೇ ಆಗಲಿ, ಗೋದಾವರಿಯ ಸ್ನಾನದಿಂದ ಪಾಪ ಪರಿಹಾರ ಆಗೇ ಆಗ್ತದೆ; ಈ ಗುರು–ಸಿಂಹ ಜೋಡಣೆಯಲ್ಲಿ, ಪಾಪ ಪರಿಹಾರಕ್ಕಿಂತಲೂ ಹೆಚ್ಚಿನ ಕೃಪೆಯಂದರೆ, ದೇವರಲ್ಲಿ ಅತ್ಯಂತಿಕ ಭಕ್ತಿ— 'ಇದನ್ನು ನನಗೆ ಉಳಿಸಿ ಕೊಡಮ್ಮ, ಗೋದೆ'_ ಎಂದು ಕೇಳಿಕೊಂಡಿದ್ದಾರೆ.

ವಾದಿರಾಜರು ಆ ನದಿ ತೀರಕ್ಕೆ ಹೋದಾಗ, ಸೊಗಸಾದ ತಂಗಾಳಿ ತೀಡುತ್ತಿದ್ದಿರಬೇಕು. ಅದು ಮಂದವಾದ ಸುಳಿಗಾಳಿ ಏನಲ್ಲ. ಆ ಗಾಳಿಯಲ್ಲಿ ಕಸಕಡ್ಡಿ, ಧೂಳು ದೂಡಲ್ಪಟ್ಟಿದ್ದವು. ಗೋದಾವರಿಯು ಜನರ ಪಾಪಗಳನ್ನು ಹೀಗೆ ದಬ್ಬುವಳು– ಎಂಬುದಾಗಿ ವಾದಿರಾಜರು ಭಾವಿಸಿದ್ದಾರೆ. "ಗೋದೆ ಸಮಸ್ತ ಫಲದೆ ಸ್ನಾನ ಒದಗಿ ಮಾಡಿದರೊಮ್ಮೆ" ಎಂಬ ಅವರ ಕನ್ನಡ ಕೀರ್ತನೆಯಲ್ಲಿ ಈ ನದಿಯನ್ನು ಕುರಿತು ಪೌರಾಣಿಕ ಸಂದರ್ಭಗಳೂ ಮೂಡಿ ಬಂದಿವೆ.

## ಗೋಮತೀ ನದಿ

ಪುರಾಣಗಳಲ್ಲಿ ಉಕ್ತವಾಗಿರುವ, ದ್ವಾರಕೆಯ ಸಮೀಪದ ಗೋಮತೀ ನದಿಯು ಅಷ್ಟೊಂದು ಪ್ರಚುರವಾದದ್ದಲ್ಲ. ಆದರೇನು, ಒಂದು ಕಾಲಕ್ಕೆ

ಶ್ರೀ ಕೃಷ್ಣನು ಸ್ನಾನ ಮಾಡಿದ್ದರಿಂದ ಅವನ ಪಾದ ಧೂಳಿಯಿಂದ ಪಾವನ ವಾದದ್ದು ತಾನೇ. ಆದ್ದರಿಂದ ವಾದಿರಾಜರಿಗೆ ಅದು ವರ್ಣನಾರ್ಹವಾದದ್ದೇ,

ಈ ನದಿಯು ಸದ್ಯ ಎರಡು ಖಾರಿಗಳ ರೂಪದಲ್ಲಿ ಹರಿದು ಸಮುದ್ರ ವನ್ನು ಸೇರುತ್ತದೆ. ಶ್ರೀ ವಾದಿರಾಜರ ಕಾಲಕ್ಕೂ ಹಾಗೇ ಇದ್ದಿರಬೇಕು. ಅದರ ಸಂಗಮದ ಸ್ಥಳದಲ್ಲಿ ಸಮುದ್ರದ ನೀರು ನೊರೆನೊರೆಯಾಗಿ ಇದ್ದಿರಬೇಕು. ವಿಸ್ತಾರವಾದ ಆ ಬಿಳಿ ನೊರೆಯು ಸಮುದ್ರರಾಜನ ಮಂದಹಾಸದಂತೆ ತೋರಿ ಬಂತು. ಅವನು ತನ್ನ ಸತೀಮಣಿ ಗೋಮತಿಯನ್ನು ತನ್ನ ಎರಡು ಬಾಹು ಗಳಿಂದ ಆಲಿಂಗಿಸುತ್ತಿದ್ದಾನೆ; ಗೋಮತಿಯು ಈ ವಲ್ಲಭಾಲಿಂಗನ ಸುಖವನ್ನು ಅನಿಶಂ ಎಂದರೆ ಸದಾ ಅನುಭವಿಸುತ್ತಿದ್ದಾಳೆ ಎಂದು ವಾದಿರಾಜರು ಊಹಿಸಿ ದರು. ಮತ್ತದು ದುರ್ಲಭವಾದದ್ದಂತೆ. ಏಕೆಂದರೆ ಆ ಸಮುದ್ರನಾಥನಿಗೆ ಗೋಮತಿಯಂತಹ ನದೀ ರೂಪದ ಪತ್ನಿಯರು ಅನೇಕರು !

ಫುಲ್ಲ ಫೇನ ಸಿತಾಂಭೋಧಿ ಕಲ್ಲೋಲಧೃತಯಾ ತಯಾ
ವಲ್ಲಭಾಲಿಂಗನ ಸುಖಂ ದುರ್ಲಭಂ ಲಭ್ಯತೇऽನಿಶಮ್ಃ (ಪ. ಪ್ರ. ೯೪)

## ಫಲ್ಗು ನದಿ

ಇದೇ ರೀತಿಯಾಗಿ ನದಿಯ ಸ್ವರೂಪ ಹಾಗೂ ಅದರದೊಂದು ಪೌರಾಣಿಕ ಸಂದರ್ಭ– ಇವನ್ನು ಮುಂದಿಟ್ಟುಕೊಂಡು ವಾದಿರಾಜರು ಫಲ್ಗು ನದಿಯನ್ನು ಬಣ್ಣಿಸಿದ್ದಾರೆ. ಗಯಾ ಕ್ಷೇತ್ರಕ್ಕೆ ಹೊಂದಿಕೊಂಡು ಹರಿಯುವ ಈ ನದಿಯ ಪಾತ್ರವು ಅತಿ ಕಿರಿದಾದದ್ದು. ಗಂಗಾ ನದಿಗೆ ಹೋಲಿಸಿದರೆ ಅದೊಂದು ಲೆಕ್ಕವೇ ಅಲ್ಲ. ಆ ಕಾರಣದಿಂದ ಅದು 'ಫಲ್ಗು' ಎಂಬ ಅನ್ವರ್ಥಕ ನಾಮ ವನ್ನೇನೊ ಪಡೆಯಿತು. ಆದರೆ ಇಲ್ಲಿ ಸ್ನಾನ ಮಾಡಿ ಗಯೆಯ ವಿಷ್ಣು ಪಾದ ವನ್ನು ಪೂಜಿಸಿದರೆ ಗಂಗಾ ನದಿಯಲ್ಲಿ ಮಿಂದಷ್ಟೇ ಪುಣ್ಯಪ್ರಾಪ್ತಿ ಎಂದು ಆಸ್ತಿಕರು ನಂಬಿರುತ್ತಾರೆ, ಆದರೆ ಫಲ್ಗು ನದಿ ಬೇರೆಯಾಗಿಯೇ ಭಾವಿಸುತ್ತ ದಂತೆ "ಅಯ್ಯೋ ಜನ ಎಷ್ಟೊಂದು ದೂರದಿಂದ ನನ್ನಲ್ಲಿಗೆ ಬರುತ್ತಾರೆ;

ನಾನು ಅವರಿಗೆ ಕೊಡುವ ಫಲ, ಅಲ್ಪವೇ" ಎಂದು 'ಇಂಥ ನಿರಂಹಕಾರ ವೃತ್ತಿ ನನ್ನಲ್ಲಿಯೂ ಬರಲಿ' ಎಂದು ವಾದಿರಾಜರು ದೇವರಲ್ಲಿ ಕೇಳಿಕೊಳ್ಳುತ್ತಾರೆ.

### ಯಮುನಾ ನದಿ

ಈ ನದಿಯ ಪವಿತ್ರತೆಯನ್ನು ಮಂಗಾಣುವಲ್ಲಿ ವಾದಿರಾಜರು ಮತ್ತೊಮ್ಮೆ ಸ್ವೋಪಜ್ಞತೆಯನ್ನು ಮೆರೆದಿದ್ದಾರೆ. ಪೌರಾಣಿಕವಾಗಿ ಯಮುನೆಯ ಅಣ್ಣ ಯಮ, ಸಮುದ್ರನೇ ಅವಳ ಪತಿ. ಆ ಸಮುದ್ರ ಎಂದರೆ ಶ್ರೀಮನ್ನಾರಾಯಣನು ವಾಸವಾಗಿರುವ ಸ್ಥಳ. ಯಮುನೆಯಂತೂ ತನ್ನಲ್ಲಿ ಸ್ನಾನ ಮಾಡ ಬಂದವರಿಗೆ ಪುಣ್ಯದಾಯಿನಿ. ಆದರೆ ತನ್ನಲ್ಲಿ ಸ್ನಾನ ಮಾಡ ಬಂದವರನ್ನು ಶ್ರೀ ಮನ್ನಾರಾಯಣನಿರುವ ತನ್ನ ಗಂಡನ ಮನೆಗೆ ಕಳಿಸುತ್ತಾಳಲ್ಲದೆ, ತವರು ಮನೆಯ ಸಹಜಾಭಿಮಾನ ಹಿಡಿದು, ಯಮರಾಜನಲ್ಲಿಗೆ, ಅಲ್ಲ. ಗೃಹಿಣಿಯರಿಗೆ ತವರಿನ ಮೇಲೆ ಹೆಚ್ಚಿನ ಮೋಹವಿರುವುದು ನಿಜವೇ. ಆದರೆ ಎಲ್ಲ ಸಂದರ್ಭಗಳಲ್ಲಿ ಅಲ್ಲವಂತೆ. ಪತಿಯು ಅತ್ಯಂತ ಪ್ರೀತ್ಯಾಸ್ಪದನಿದ್ದರೆ, ತವರು ಮನೆಗಿಂತ ಪತಿ ಗೃಹವೇ ಆಪ್ಯಾಯಮಾನವಾಗುತ್ತದೆ. 'ಸ್ನಿಗ್ಧೇ ಭರ್ತರಿ ಕಾಮಿನೀ ಜನರುಚಿಃತತ್ಪಕ್ಷ ಏವ' ಎನ್ನುತ್ತಾರೆ ವಾದಿರಾಜರು.

### ಗಂಗಾ ನದಿ

ಗಂಗಾ ನದಿಯು ಸಮಸ್ತ ಭಾರತೀಯರಿಗೆ ಅತ್ಯಂತ ಪೂಜ್ಯವಾದದ್ದೆಂಬುದನ್ನು (ಈಗ ಅದರ ನೀರು ಹೇಗೆ ಇದ್ದರೂ !) ಬೇರೆ ಹೇಳಬೇಕಿಲ್ಲ.* ಇತರ ನದಿಗಳಿಗೆ ಅದು ಹಿರಿಯಕ್ಕನಂತಿದೆ. ಈ ಅಕ್ಕ ವರ್ಷದಲ್ಲೊಂದು ಬಾರಿ ತನ್ನ ಕೆಲವು ತಂಗಿಯರಿಗೆ ಭೆಟ್ಟಿಕೊಡುವುದೂ ಉಂಟು. ಕರ್ನಾಟಕವಲ್ಲಿ ವರದಾ, ಕೃಷ್ಣಾ, ಶಾಲ್ಮಲಾ ಮುಂತಾದ ನದಿಗಳು ಆ ಭಾಗ್ಯವನ್ನು ಹೊಂದಿವೆ. ಈ ನಿಮಿತ್ತದ ವಾದಿರಾಜೀಯ ಕಲ್ಪನೆಗೆ ಒಂದು ಉದಾಹರಣೆಯನ್ನು ಕೊಡುವೆ.

---

* ಕೆಲವು ನದಿಗಳಂತೂ ಗಂಗೆಯನ್ನು ತಮ್ಮ ಹೆಸರಿಗೇ ಜೋಡಿಸಿಕೊಂಡಿವೆ. ಧರ್ಮಗಂಗಾ, ಬಾಣಗಂಗಾ, ಪಾತಾಳಗಂಗಾ; ಇತ್ಯಾದಿ.

ಶಾಲ್ಮಲಾ ನದಿಯು ಗೋಕರ್ಣದ ಬಳಿ ಸಮುದ್ರವನ್ನು ಸೇರುತ್ತದೆ. ಆಗ ಅದರ ನೀರು ಸ್ವಾಭಾವಿಕವಾಗಿಯೇ ಉಪ್ಪು ನೀರು. ಆದರೆ ಗಂಗೆಯು ಸನ್ನಿಹಿತವಾದಾಗ (ಭಾದ್ರಪದ ಶು. ೮) ಅದು ಸಿಹಿಯಾಗಿರುವುದಂತೆ (ಎಂತಲೇ ಆಗ ಜನರು ಅದರಲ್ಲಿ ಸ್ನಾನ-ಪಾನಾದಿಗಳನ್ನು ಮಾಡುವರು) ಇದನ್ನು ವಾದಿರಾಜರು ಉತ್ಪ್ರೇಕ್ಷಿಸಿದ ರೀತಿ ಹೀಗಿದೆ.

ಯಾವಳೊ ಒಬ್ಬ 'ಲಾವಣ್ಯ' ವತಿಯು (ಉಪ್ಪುಗಾರ್ತಿ ! ಲಾವಣ್ಯಕ್ಕೆ ಉಪ್ಪು ಎಂದೂ ಅರ್ಥವಿವೆ). ತನ್ನ ಮೈಸೊಕ್ಕಿನಲ್ಲಿ ಹಗಡಿಕೊಂಡು ಇರುವಾಗ, ಸಂಬಂಧಿಕರು ಅವಳನ್ನು ದೂರವಿರಿಸುತ್ತಾರೆ (ಎಂದರೆ ಅವಳಲ್ಲಿಗೆ ಹೋಗುವುದಿಲ್ಲ). ಆಗ ಹಿರಿಯವಳೊಬ್ಬಳು ಬಂದು ಹಿತವಚನ ಹೇಳಿ ಇತರರೊಡನೆ ಹೊಂದಿಕೊಳ್ಳುವಂತೆ ಮಾಡುತ್ತಾಳೆ. ಆ ಕೆಲಸವನ್ನು ಗಂಗೆಯು ಇಲ್ಲಿ ಮಾಡುತ್ತಾಳಂತೆ.

ಗಂಗಾ ಮಾತೆಯು ವಾದಿರಾಜರಿಗೆ ಇನ್ನೊಂದು ಕಾರಣದಿಂದ ವಿಶೇಷ ಆಪ್ಯಾಯಮಾನವಾಗಿದ್ದಾಳೆ. ಯಾಕೆಂದರೆ ಅವಳು ತ್ರಿವಿಕ್ರಮ ದೇವರನ್ನು ಸೋದೆಗೆ ಕಳಿಸಿಕೊಟ್ಟಿಲ್ಲದೆ, ತಾನು ಅಲ್ಲಿ 'ಧವಳಗಂಗೆ' ಯಾಗಿ ನೆಲೆನಿಂತಳು.

ಶ್ರೀ ವಾದಿರಾಜರ ದೃಷ್ಟಿಯಲ್ಲಿ ಗಂಗಾನದಿಯು ಬರಿ ಒಂದು ಪ್ರವಾಹವಲ್ಲ. ಆಕೆ 'ದಿವ್ಯರೂಪ ಧಾರಿಣಿ' ಎಂದು ಪರಿಭಾವಿಸಿ ಪಾದಾದಿ-ಕೇಶ-ಪರ್ಯಂತ, ಅವಳ ಸುಂದರ ರೂಪವನ್ನು ವರ್ಣಿಸಿದ್ದಾರೆ. ಆಕೆ ಸುಕುಮಾರ ಪಾದಕಮಲಗಳುಳ್ಳವಳು, ಆಕೆಯ ರಂಭೋರುವಿನ ಮೇಲೆ ಸೀರೆಯ ನೆರಿಗೆಗಳು ಶೋಭಿಸುತ್ತವೆ. ಅದರ ಮೇಲೆ ಕಮನೀಯವಾದ ಒಡ್ಯಾಣ, ಅವಳ ಘನ ಕುಚದ ಮೇಲೆ ಹರಡಿರುವ ಹಾರ, ಉಂಗುರ, ಬಳೆಗಳು, ವಂಕಿಗಳಿಂದ ಅಲಂಕೃತವಾದ ಹಸ್ತಗಳು–ಮುಂತಾಗಿ ಆ ವರ್ಣನೆ ಮೂಡಿ ಬಂದಿದೆ. ಈ ಭಾವವನ್ನೊಳಗೊಂಡ 'ಹೇ ಗಂಗೇ, ತವ ಕೋಮಲಾಂಘ್ರಿ ನಲನಂ...' ಎಂಬ ಶ್ಲೋಕವನ್ನು ಗಂಗಾಸ್ತುತಿಯಾಗಿ ಇಂದಿಗೂ ಅನೇಕರು ನಿತ್ಯ ಪಠಿಸುತ್ತಾರೆ.

ಪ್ರಯಾಗದಲ್ಲಿ ಯಮುನಾ, ಸರಸ್ವತೀ ನದಿಗಳು ಬಂದು ಸೇರುತ್ತವಲ್ಲವೆ. ಯಮುನೆಯ ನೀರು ಕಪ್ಪು; ಸರಸ್ವತಿಯದು ಕೆಂಪು. ಸ್ವತಃ ಗಂಗೆಯದು ಬಿಳಿ. ಆದರೆ ಈ ತ್ರಿವೇಣಿಯ ತ್ರಿವರ್ಣ ಸಂಗಮವು ಪ್ರಯಾಗದಲ್ಲಿ ಮಾತ್ರವಲ್ಲ; ಆ ಮುಂಚೆಯೂ ಆಗಿದೆ–ಎನ್ನುತ್ತಾರೆ ವಾದಿರಾಜರು. ಹೇಗೆಂದರೆ—

ಗಂಗೆ ಹುಟ್ಟಿದ್ದು ವಿಷ್ಣುವಿನ ಪಾದದಲ್ಲಿ. ಅವನ ಪಾದವು ಕೆಂಪು–ನೀಲಿಯದು. ಜೊತೆಗೇ ಗಂಗೆಯ ಬಿಳಿ ವರ್ಣ. ಆಯಿತಲ್ಲ ತ್ರಿವರ್ಣ! ಆ ಮುಂದೆ, ಎಂದರೆ ಅವಳ ದೇವಲೋಕ ಸಂಚಾರದ ಕೊನೆಯ ಹಂತದಲ್ಲಿ ಶಿವನು ತನ್ನ ಶಿರವನ್ನೊಡ್ಡಿ ಅವಳನ್ನು ಭೂಮಿಗೆ ಇಳಿಸುತ್ತಾನಲ್ಲವೆ, ಅವನ ಜಟೆ ಕೆಂಪು ವರ್ಣದ್ದು. ಅವನ ವಿಷಕಂಠ ನೀಲಿಯದು, ಹೀಗೆ ಗಂಗೆಯು ಆರಂಭದಿಂದ ಹಾಗೂ ಮುಂದುವರಿಯುತ್ತಿದ್ದ ಹಾಗೆ ತ್ರಿವರ್ಣರಂಜಿತವಾಗಿಯೇ ಹರಿದು ಬರುತ್ತಾಳೆ. ಇನ್ನು ಸರಸ್ವತಿ: ಯಮುನೆಯರು ಸೇರಿದಾಗಲಂತೂ (ಕೆಂಪು, ಕಡುನೀಲಿ) ತ್ರಿವರ್ಣವಾಗಿಯೇ ಇದೆ. ಅವಳ ಪಾವಿತ್ರ್ಯ ಮುಮ್ಮಡಿಸಿದೆ. ಪ್ರಯಾಗದ ಸಂಗಮವನ್ನು ಕಂಡಾಗ ವಾದಿರಾಜರಿಗೆ ಸ್ಫುರಿಸಿದ ಚಿತ್ತಲಹರಿ ಇದು! ಅಂತೂ ಈ ಸಂಗಮದ ಸ್ಥಳಕ್ಕಿಂತ ಮೊದಲೇ ಗಂಗೆಯ ಮೇಲ್ಮೆಯನ್ನು ತೋರಿದ ಬಗೆ ಮನೋಜ್ಞವಾಗಿದೆ.

ಇನ್ನು ಗಂಗಾನದಿಯು ಸಮುದ್ರವನ್ನು ಸೇರುತ್ತಿದ್ದಾಗ ಅವರು ಬೇರೊಂದು ಕಲ್ಪನೆಯನ್ನು ಹೊರಹೊಮ್ಮಿಸಿದ್ದಾರೆ. ಅದರಲ್ಲಿ ಶ್ರೀಮನ್ನಾರಾಯಣನು ಅವಳ ತಂದೆ–ಎಂಬ ಅಂಶ, ಅವನ ಗುಡಿಗಳು ಗಂಗೆಯ ದಡದಲ್ಲಿ ಅಲ್ಲಲ್ಲಿ ಹರಡಿವೆ ಎಂಬ ಮತ್ತೊಂದು ಅಂಶ ಹಾಗೂ ಕೊನೆಯಲ್ಲಿ ಸಮುದ್ರನಾಥನನ್ನು ಕೂಡುವಲ್ಲಿ ನದಿಯ ಪ್ರವಾಹವು ಹಲವು ಹತ್ತು ಶಾಖೆಗಳಾಗಿರುವ ಅಂಶ (ಪಶ್ಚಿಮ ಬಂಗಾಲದ ನಕಾಶದ ದಕ್ಷಿಣ ಭಾಗವನ್ನು ಜ್ಞಾಪಿಸಿಕೊಳ್ಳಬಹುದು)– ಇವೆಲ್ಲ ಅತ್ಯಂತ ಹೃದ್ಯವಾದ ಕಲ್ಪನೆಗೆ ಎಡೆ ಮಾಡಿಕೊಟ್ಟಿವೆ. ವಿವರವಾಗಿ ನೋಡೋಣ :

ತಂದೆಯಾದವನಿಗೆ ಮಗಳನ್ನು ಮದುವೆ ಮಾಡಿಕೊಟ್ಟು ಗಂಡನ ಮನೆಗೆ ಕಳುಹಿದ ಮೇಲೂ ಅವಳ ಮೇಲಿನ ಮೋಹ ಮರೆಯಾಗದೆನ್ನುವುದು ಇಂದಿಗೂ

ಸತ್ಯವಾದದ್ದು. ಏನಾದರೂ ನೆವ ಮಾಡಿಕೊಂಡು ಆತ ಮಗಳನ್ನು ಕಾಣ ಬಯಸುತ್ತಾನೆ. ಅಳಿಯನ ಮನೆಗೂ ಧಾವಿಸಬಹುದು. ಪ್ರಕೃತ ಸಂದರ್ಭ ದಲ್ಲಿ ಶ್ರೀಮನ್ನಾರಾಯಣನು ತನ್ನ ಮಗಳು–ಗಂಗಾ ಉತ್ತರೋತ್ತರದ ಬದರಿ ಕಾಶ್ರಮದಿಂದ ಮೊದಲ್ಗೊಂಡು, ಸಮುದ್ರವನ್ನು ಸೇರುವವರೆಗೆ ಅಲ್ಲಲ್ಲಿ ವಿವಿಧ ರೂಪಗಳಲ್ಲಿ ಸಂದರ್ಶಿಸುತ್ತಲೇ ಇದ್ದಾನೆ.

ಬದರಿಕಾಶ್ರಮದಲ್ಲಿ — ನಾರಾಯಣನಾಗಿ
ಅಲಕನಂದಾ–ಭಾಗಿರಥೀ — ಗೋಪಾಲಕೃಷ್ಣನಾಗಿ
ತಪೋವನ ಎಂಬಲ್ಲಿ — ಹೃಷೀಕೇಶನಾಗಿ
(೨೪ ಮೂರ್ತಿಗಳಲ್ಲಿ ಒಬ್ಬ)
ಜಹ್ನು ಕ್ಷೇತ್ರದಲ್ಲಿ — ಅನಂತಶಯನಾಗಿ
ಹಸ್ತಿನಾಪುರದಲ್ಲಿ — ಗೋವಿಂದನಾಗಿ
ವ್ಯಾಸಾಶ್ರಮದಲ್ಲಿ — ವೇದವ್ಯಾಸನಾಗಿ
ಸೂಕರ ಕ್ಷೇತ್ರದಲ್ಲಿ — ಶ್ವೇತವರಾಹನಾಗಿ
ಪ್ರಯಾಗದಲ್ಲಿ — ವೇಣಿಮಾಧವನಾಗಿ
ಕಾಶಿಯಲ್ಲಿ — ಬಿಂದುಮಾಧವನಾಗಿ ಮತ್ತು
ಗಂಗಾ–ಸಾಗರ ಸಂಗಮ ಸ್ಥಳದಲ್ಲಿ— ಉದಾರ ಮಾಧವನಾಗಿ

ವಾಸ ಹೂಡಿದ್ದಾನೆ– ಈಗಲೂ ಕೂಡ. ಏನು ಹೇಳಬೇಕು, ಇಂಥ ಮೋಹಕ್ಕೆ! ಸಾಲದ್ದಕ್ಕೆ ಒಬ್ಬಳೇ ಮಗಳೇನೋ! ಆದ್ದರಿಂದ ಅತ್ಯಂತ ಪ್ರೀತಿಪಾತ್ರಳು. ಇಷ್ಟಕ್ಕೆ ಮುಗಿಯಲಿಲ್ಲ ಈ ಮೋಹ. ಕೊನೆಯಲ್ಲಿ ಅಳಿಯನ ಮನೆಯಲ್ಲಿಯೇ ಶೇಷಶಾಯಿಯಾಗಿ ನಿಂತುಬಿಟ್ಟ–ಮನೆ 'ಮಾವ' ನಾಗಿ.*

---

* ಶ್ರೀ ನಾರಾಯಣ ರಾಮ ಗೋಪತಿ ಹೃಷೀಕೇಶಾದಿ ರೂಪೈಃ ಕಮಸ್ತ್ವಮ್ ಹಾತುಮ್ ಹರಿಸೂಕರಾಕೃತಿ ರಥ ಶ್ರೀ ದೇವಹೂತ್ಯಾತ್ಮಜಃ ವೇಣಿಮಾಧವ ಬಿಂದು ಮಾಧವ ತನುಸ್ತೀರೇ ವ್ಯಧತ್ತಸ್ಥಿತಿಂ ಗಂಗೇ ಕಿಮ್ ಬಹುನಾಧುನಾಪಿ ವಸತಿ— ತ್ವದ್ಭರ್ತೃಗೇಹೇ ಹ್ಯಸೌ. (ಉ. ಪ್ರ. 21)

ಈ ಪ್ರಸಂಗದ ಹಿಂದಿರುವ ಪ್ರಮೇಯ- ಎಂದರೆ ಗಂಗೆಯ ಪ್ರವಾಹದಲ್ಲಿ ಸದಾಕಾಲ ಇರುವ ಶ್ರೀಹರಿಯ ಸಾನ್ನಿಧ್ಯ. ಅಂತೆಯೇ ಅವಳು ಪಾಪನಾಶಿನಿ, ಪರಮಪವಿತ್ರೆ ಅಂತೆಂಬುದಕ್ಕೆ ಇಷ್ಟೊಂದು ಸೊಗಸಾದ ಕಲ್ಪನೆಯ ಬಳ್ಳಿಯನ್ನು ಹಬ್ಬಿಸಿದ್ದಾರೆ-ವಾದಿರಾಜರು. ಗಂಗಾನದಿಯ ಕುರಿತಾದ ಯಾವುದೇ ವರ್ಣನೆಯಲ್ಲಿ ಇದರಷ್ಟು ಸುಂದರವಾದ ಭಾವಸ್ಫುರ್ತಿ ಬೇರೆಡೆ ಕಾಣಸಿಗದು.

ಇತ್ತ ಗಂಗಾ-ಸಾಗರ ಸಂಗಮದ ಕುರಿತ ಶ್ಲೋಕದಲ್ಲಿ ಶ್ಲೇಷ ಬಹಳ ಚೆನ್ನಾಗಿ ವ್ಯಕ್ತವಾಗಿದೆ. ಗಂಗೆಯು ಸಮುದ್ರವನ್ನು ಸೇರುವಲ್ಲಿ ಅನೇಕ ಟಿಸಲುಗಳಾಗಿ ಹರಿಯುವಳಷ್ಟೆ. ಶ್ರೀ ವಾದಿರಾಜರು ಸಮುದ್ರನೇ ತನ್ನ ಮುಖಗಳಿಂದ ಅವಳನ್ನು ಚುಂಬಿಸುತ್ತಿರುವುದಾಗಿ ವರ್ಣಿಸಿದ್ದಾರೆ.

ಅಬ್ಧೇ! ಸ್ನಿಗ್ಧೋಽಸಿ ಸರಸೇಷ್ವದ್ಯೋಽಸ್ಯಬ್ಜ ಸಖೋಽಪ್ಯಸಿ
ಮುಖೈರನೇಕೈರ್ಯೋ ಗಂಗಾಮುಖಾನ್ಯಾಚುಂಬ್ಯ ಜೃಂಭಸೇ ॥೧॥
(ಪೂ. ಪ್ರ. ೧)

ಸಮುದ್ರನನ್ನು ಸಂಬೋಧಿಸಿ ಇಲ್ಲಿ ಬಂದಿರುವ ಶಬ್ದಗಳಲ್ಲಿ ದ್ವ್ಯರ್ಥವೂ ಇದೆ :

ಸ್ನಿಗ್ಧೋಽಸಿ; ಎಂದರೆ ನೀನು ಸ್ನೇಹಪೂರ್ಣನಾಗಿದ್ದೀಯ
ಸರಸೇಷು ಅದ್ಯ; ಜಲಾದಿರಸಯುಕ್ತರಲ್ಲಿ ಮೊದಲಿಗನಾಗಿದ್ದೀಯೆ
ಅಜ್ಜ ಸಖಃ; ಚಂದ್ರನಿಗೆ ಮಿತ್ರನಾಗಿರುವ
ಅನೇಕ ಮುಖೈ; ವಿವಿಧ ನದಿ ಮುಖಗಳಿಂದಾಗಿ
ಜೃಂಭಸೇ; ಅಭಿವೃದ್ಧಿ ಹೊಂದುವಿ (ಮೇಲೇರುವಿ)

## ೪. ಕ್ಷೇತ್ರಸ್ಥ ದೇವತೆಗಳು

ತೀರ್ಥ ಪ್ರಬಂಧವು ಮುಖ್ಯವಾಗಿ ತೀರ್ಥ-ಕ್ಷೇತ್ರಗಳ ಮತ್ತು ಅಲ್ಲಿರುವ ದೇವ-ದೇವತೆಗಳ ವರ್ಣನೆಯಾಗಿದೆ. ಈ ಕ್ಷೇತ್ರಗಳಲ್ಲಿ ಅವರು ಎಲ್ಲೆಲ್ಲಿಯೂ ಭಗವಂತನ ಸಾನ್ನಿಧ್ಯವನ್ನು ಕಂಡವರಾಗಿ, ಅದನ್ನು ವಿವರಿಸಲೆಂದೇ ತಮ್ಮ ಕಲ್ಪ ಕತೆಯನ್ನು ಹರಿಯಿಸಿದ್ದಾರೆಂಬುದು ಈ ವರ್ಣನೆಗಳಿಂದಲೂ ಸ್ಪಷ್ಟವಾಗುತ್ತದೆ.

ಅವರು ಹೆಚ್ಚಾಗಿ ವರ್ಣಿಸಿದ ಕ್ಷೇತ್ರಗಳು ಈಗಿನ ದಕ್ಷಿಣ ಕನ್ನಡ ಜಿಲ್ಲೆಯಲ್ಲಿಯೇ ಇವೆ. ಉಡುಪಿಯಿಂದ ಆರಂಭಿಸಿ ಪಾಜಕ, ಎಲ್ಲೂರು, ನಡ್ಯಂತಾಡಿ, ಸುಬ್ರಹ್ಮಣ್ಯ, ಕುಂಭಾಸಿ, ಕೋಟೇಶ್ವರ ಕ್ರೋಡ ಮತ್ತು ಕೊಲ್ಲೂರಿನ ವರೆಗೂ ಅವರು ನಮ್ಮನ್ನು ಕರೆದೊಯ್ಯುತ್ತಾರೆ. ಇವುಗಳಲ್ಲಿ ಕೆಲವನ್ನು ಗಮನಿಸೋಣ.

**ಉಡುಪಿ :**

ಶ್ರೀ ಮಧ್ವಾಚಾರ್ಯರು ಪ್ರತಿಷ್ಠಾಪಿಸಿದ ಶ್ರೀ ಕೃಷ್ಣನ ಕ್ಷೇತ್ರ. ವಾದಿ ರಾಜರು ತಮ್ಮ ಪರ್ಯಾಯ ಕಾಲಗಳಲ್ಲಿ ಪರಮಭಕ್ತಿಯಿಂದ ಆತನನ್ನು ಅರ್ಚಿಸಿದ್ದಾರೆ. ಈ ಕೃಷ್ಣನು 'ಬಾಲಕೃಷ್ಣ' ಎಂದರೆ ಅವನ ಲೀಲೆಗಳೆಲ್ಲ ದ್ವಾರಕೆಯಲ್ಲಿ ಪ್ರಕಟಗೊಂಡವುಗಳು. ಇಂಥ ದ್ವಾರಕಾಪುರವಾಸಿ ಕಲಿಯುಗದಲ್ಲಿ ಉಡುಪಿಗೆ ಬಂದು ನಿಂತನಲ್ಲವೆ. ಶ್ರೀ ವಾದಿರಾಜರು ಊಹಿಸಿದ ರೀತಿ ಹೀಗಿದೆ:

ಸಕಲ ಸೌಕರ್ಯಗಳಿಂದ ಕೂಡಿ, ಸಂಪದ್ಭರಿತವಾದ ದ್ವಾರಕೆಯಲ್ಲಿ ಗೋಪಾಲ ಬಾಲೆಯರು ಅವಿಚ್ಛಿನ್ನವಾಗಿ ಅವನ ಆದರಾತಿಥ್ಯ ಮಾಡುವವರಿದ್ದೂ, ಅದನ್ನೆಲ್ಲ ಬಿಟ್ಟು ಇಲ್ಲಿ–ಉಡುಪಿಯಲ್ಲಿ ನೆಲೆ ನಿಂತ. ಇಷ್ಟೇ ಅಲ್ಲ ತನ್ನ ರಮೆಯ ತವರಿನ ಸ್ಥಳವಾದ ಸಮುದ್ರವನ್ನೂ ತೊರೆದು ಇಲ್ಲಿ ಸ್ಥಾಯಿಯಾಗಿದ್ದಾನೆ. ಇದು ಏನನ್ನು ತೋರಿಸುತ್ತದೆ ? ಶ್ರೀ ಕೃಷ್ಣನಿಗೆ ಉಡುಪಿಯೆ ಉಳಿದೆಲ್ಲ ಕ್ಷೇತ್ರಗಳಿಗಿಂತ ಹೆಚ್ಚು ಪವಿತ್ರದ್ದಾಗಿ ಕಂಡಿತೆಂಬುದು. ಆದ್ದರಿಂದ ಇದರ ಮಹಾತ್ಮೆ

ಇಷ್ಟೇ ಎಂದು ಹೇಳಲುಂಟೆ ? (ಪ. ಪ್ರ. ೯) ಎಂಬುದಾಗಿ ಅದರತ್ತ ನಮ್ಮ ಗಮನವನ್ನು ಸೆಳೆದಿದ್ದಾರೆ.

ಈ ಬಾಲಕೃಷ್ಣನ ಕೈಯಲ್ಲಿ ಕಡಗೋಲು ಮತ್ತು ಕಡೆಯುವ ಹಗ್ಗ ಇವೆಯಷ್ಟೆ. ದ್ವಾಪರಯುಗದಲ್ಲಿ ಅವನ್ನು ಮೊಸರು ಕಡೆಯುವುದಕ್ಕೆ ಬಳಸಿರಬಹುದು. ಆದರೆ ಈಗ ? ಅವು ಸಂಸಾರ ಸಮುದ್ರದಲ್ಲಿ ತೊಳಲುವವರಿಗೆ ಅಮೃತವನ್ನು ಕಡೆದು ನೀಡುತ್ತೇನೆ ಎಂಬ ಅಭಯವನ್ನು ಕೊಡಲೆಂದೂ, ಅದಕ್ಕಾಗಿ ಕೈಯಲ್ಲಿ ಸಜ್ಜಾಗಿ ಹಿಡಿದುಕೊಂಡು ನಿಂತಿರುವನೆಂದೂ ವಾದಿರಾಜರು ಕಲ್ಪಿಸಿದ್ದಾರೆ.*

ಶ್ರೀ ವಾದಿರಾಜರಿಗೆ ಅಷ್ಟೇ ಆತ್ಮೀಯವಾದದ್ದು ಪಾಜಕ ಕ್ಷೇತ್ರ, ಆಚಾರ್ಯ ಮಧ್ವರ ಜನ್ಮಸ್ಥಳವದು, ಬಳಿಯಲ್ಲಿಯೆ ದುರ್ಗಾದೇವತೆ ಇರುವ ಬೆಟ್ಟ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ದುರ್ಗಾದೇವಿಯ ಮೂರು ಗುಡಿಗಳಿವೆ. ಒಂದೊಂದಕ್ಕೂ ತಮ್ಮದೇ ಆದ ವೈಶಿಷ್ಟ್ಯ, ಶ್ರೀ ವಾದಿರಾಜರು ಆ ಮೂರನ್ನೂ ಈ ಶ್ಲೋಕದಲ್ಲಿ ಪ್ರಸ್ತಾಪಿಸಿದ್ದಾರೆ ?

ಪ್ರಲಯೇ ಜಲದುರ್ಗಾಸಿ ಸರ್ಗಾದಾ ಗಿರಿ ವಿಸ್ತೃತಿಃ
ಇದಾನೀಂ ಸ್ಥಳದುರ್ಗಾಸಿ ದುರ್ಗಾ ತ್ವಂ ಸದ್ಗುಣಾರ್ಣವೇ ॥

ಇವುಗಳಲ್ಲಿ ಜಲದುರ್ಗವು ಕಟೀಲಿನಲ್ಲಿ ಇದೆ. ದುರ್ಗೆ, ಸಮುದ್ರ ಜಲದಲ್ಲಿ ಇರುವಳೆಂದು ಪುರಾಣ ಪ್ರತೀತಿ ಇದೆ). ಗಿರಿದುರ್ಗ ಇರುವುದು ಬೆಳ್ಮಣ್ಣಿನಲ್ಲಿ. ಅದುವೆ ವಾದಿರಾಜರು ಹೇಳಿರುವ ಗಿರಿ ವಿಸ್ತೃತಿ. ಮೂರನೆಯದು ಪಾಜಕ ಕ್ಷೇತ್ರದ ಬಳಿಯಿರುವ ಸ್ಥಳದುರ್ಗ. ಎಂದರೆ ಅದು ದುರ್ಗೆಯ ಶಾಶ್ವತ ಸ್ಥಳ.

---

* ಶ್ರೀ ವಾದಿರಾಜರ ಅನೇಕ ಕನ್ನಡ ಸ್ತೋತ್ರಗಳಲ್ಲಿಯೂ ಬಾಲಕೃಷ್ಣನು ಕಾಣಿಸಿಕೊಂಡಿದ್ದಾನೆ. ಒಂದರಲ್ಲಿಯಂತೂ (ಉತ್ಸವದಲ್ಯಾಹಿಕವ ಕಡು ಜನರು ಕೇಳಿರಯ್ಯ) ಅವನ ಪೂಜಾ ವೈಭವವನ್ನು ವರ್ಣಿಸಿದ್ದು, ಆ ಪೂಜಾಕ್ರಮವನ್ನು ಪ್ರತ್ಯಕ್ಷವಾಗಿ ಕಾಣುತ್ತಿದ್ದೇವೆ ಎಂಬಷ್ಟು ಸುವ್ಯಕ್ತವಾಗಿದೆ.

'ದುರ್ಗಾ ಎಂಬ ಹೆಸರು ಇಲ್ಲಿ ನಿನಗೆ ಹೆಚ್ಚು ಅನ್ವರ್ಥಕ' ಎಂಬುದಾಗಿ ವಾದಿರಾಜರು ಬಣ್ಣಿಸಿದ್ದಾರೆ.

ಪಾಜಕ ಕ್ಷೇತ್ರಕ್ಕೆ ಮಹಾತ್ಮ್ಯವನ್ನುಂಟು ಮಾಡಿದ ಮಧ್ವಾಚಾರ್ಯರನ್ನು ವರ್ಣಿಸಿದ ಬಗೆ ಸೊಗಸಾಗಿದೆ, ಆದರೆ ಅವರನ್ನು ಕುರಿತ ನೇರ ಸ್ತುತಿ ಇರದೇ, ಈ ತೀರ್ಥಪ್ರಬಂಧ ಕೃತಿಯ ರಚನೆಯಲ್ಲಿ ಅವರ ಕೃಪೆ ತನ್ನ ಮೇಲಿರಲಿ ಎಂಬ ಆಶಯ ಅಲ್ಲಿದೆ: ಮಧ್ವರು ವಾಯುದೇವರ ಅವತಾರ ತಾನೇ. ಗಾಳಿಯು (ತಂಗಾಳಿ), ಬಲು ಭಾರವನ್ನು ಹೊತ್ತು ದೇಶಾಟನ ಮಾಡಿದ ಪಾಂಥೇಯನ ಶ್ರಮವನ್ನು ಪರಿಹರಿಸುವಂತೆ, ವಿವಿಧ ಕ್ಷೇತ್ರಗಳ ವರ್ಣನಾ ಭಾರದಿಂದ ಶ್ರಮ ಪಟ್ಟ ತನ್ನ (ಮಾನಸಿಕ) ಆಯಾಸವನ್ನು ಗುರುಮಧ್ವರು ಪರಿಹರಿಸಲಿ–ಎಂಬ ಸಾದೃಶ್ಯವನ್ನು ಕೊಟ್ಟಿದ್ದಾರೆ. (ಪ. ಪ್ರ. ೩)

**ಸುಬ್ರಮಣ್ಯ :**

ಸುಬ್ರಹ್ಮಣ್ಯ ಕ್ಷೇತ್ರದ ವಿವರಣೆ ಐದಾರು ಶ್ಲೋಕಗಳಲ್ಲಿ ಮನದುಂಬಿ ಹೊರಹೊಮ್ಮಿದೆ (ಪ. ಪ್ರ. ೩೭–೪೨). ಈ ಕ್ಷೇತ್ರಸ್ಥನಾದ ಕುಮಾರಸ್ವಾಮಿಯ ಸೇವೆ ಮಾಡಿದರೆ ಕುಷ್ಠ ರೋಗಿಗಳು ಅದರಿಂದ ನಿವಾರಣೆ ಹೊಂದುತ್ತಾರೆಂಬ ನಂಬಿಕೆ ಬಹುಕಾಲದಿಂದ ರೂಢವಾಗಿದೆ. ಪುರಾಣಕಾಲದ ಓರ್ವ ಬ್ರಾಹ್ಮಣನು ಬ್ರಹ್ಮಹತ್ಯೆ ಮಾಡಿದ್ದರಿಂದ ಶಪಿತನಾದನು. ಆಗ ಆ ಬ್ರಾಹ್ಮಣನು ಕುಮಾರ ಸ್ವಾಮಿಯ ಮೊರೆಹೊಕ್ಕನಂತೆ. ಅಂದಾಗ ಓರ್ವ ಕೊಲೆ ಪಾತಕಿಯನ್ನು ಕುಮಾರಸ್ವಾಮಿಯು ರಕ್ಷಿಸಬೇಕು. ಇದು ಎಷ್ಟರ ಮಟ್ಟಿಗೆ ಧರ್ಮಸಮ್ಮತ ? ಇಲ್ಲಿ ಪರಸ್ಪರ ವಿರೋಧವೂ ಬಂತಲ್ಲ ? ಹೀಗೆ ಎರಡು ವಿರೋಧ ವಿಚಾರಗಳು ಒಂದೆಡೆ ಬಂದರೆ, ಎರಡನೆಯದನ್ನು ಪ್ರಾಮಾಣ್ಯವೆಂದು ತಿಳಿಯಬೇಕು; ಮತ್ತು ಅದನ್ನು ಸ್ವೀಕರಿಸಬೇಕು– ಎಂಬುದಾಗಿ ಪಾಣಿನಿಯ ಸೂತ್ರವೇ ಇರುವುದರಿಂದ ('ವಿಪ್ರತಿಷೇಧೇಪರಂ ಕಾರ್ಯಂ') ಸುಬ್ರಹ್ಮಣ್ಯನು ತನಗೆ ಶರಣು ಬಂದವರನ್ನು ರಕ್ಷಿಸಬೇಕಾದ್ದೇ ಸರಿಯಾದದ್ದು. ಹಾಗೂ ಅದರಂತೆ ಮಾಡಿಯೂ ಇದ್ದಾನೆ. ಅರ್ಥಾತ್, ಭಕ್ತನಾದವನನ್ನು, ಶರಣು ಬಂದವನನ್ನು ಭಗವಂತನು ಎಂದೂ

ಕೈಬಿಡುವುದಿಲ್ಲ– ಎಂಬ ಅಂಶವನ್ನು ವಾದಿರಾಜರು ಹೀಗೆ ಸಂಯುಕ್ತಿಕವಾಗಿ ಮಂಡಿಸಿದ್ದಾರೆ.

ಈ ಸುಬ್ರಹ್ಮಣ್ಯ ಯಾನೆ ಸ್ಕಂದನು ಗುಹೆಯಲ್ಲಿ ವಾಸಿಸುವವನು. ಅದಕ್ಕೆ ವಾದಿರಾಜರು ಕೊಡುವ ವಿವರಣೆ ಹೀಗಿದೆ. ಲೋಕದಲ್ಲಿ ಸ್ಕಾಂದಮತವೆಂಬ ಸ್ವತಂತ್ರ ಪ್ರಣಾಲಿ ಇದೆಯಷ್ಟೆ. ಒಳ ಸಂಗತಿಯೆಂದರೆ ಸ್ಕಂದನು ಸ್ವಂತಕ್ಕೆ ವೈಷ್ಣವ ಮತೀಯನೆ! ತನ್ನ ಆರಾಧ್ಯ ದೈವತವಾದ ವಿಷ್ಣುವನ್ನು ನೆನೆಯಲೆಂದು ಗುಹೆಯಲ್ಲಿ ನೆಲೆ ನಿಂತಿದ್ದಾನೆ; ಬಹಿರಂಗವಾಗಿಯೆ ಹಾಗೆ ಮಾಡುವುದಾದರೆ ಜನ ಸ್ಕಾಂದ ಮತದ ಶ್ರೇಷ್ಠತ್ವದ ಬಗ್ಗೆ ಶಂಕೆ ತಾಳಬಹುದಲ್ಲವೇ! ಅರ್ಥಾತ್ 'ಇದು ನನ್ನ ತರ್ಕ' (ಇತಿ ಮಮ ಪ್ರತರ್ಕಃ) ಎನ್ನುತ್ತಾರೆ ವಾದಿರಾಜರು.

### ಕೊಲ್ಲೂರಿನ ಮೂಕಾಂಬಿಕೆ

ಕೊಲ್ಲೂರಿನ ಮೂಕಾಂಬಿಕೆ ದಕ್ಷಿಣ ಕನ್ನಡ ಜಿಲ್ಲೆಯ ಮತ್ತೊಬ್ಬ ಪೂಜನೀಯ ದೇವತೆ. ಅವಳ ವರ್ಣನೆಯಲ್ಲಿ ಇನ್ನೊಂದು ಬಗೆಯ ತಾರ್ಕಿಕತೆ ಇದೆ. ಆಕೆ 'ಕಂದುಕ ವಿಭೂತಿ' ಎಂದಿದ್ದಾರೆ. ಎಂದರೆ ಚೆಂಡು ಯಾವ ರೀತಿಯಲ್ಲಿ ಅತ್ತ ಇತ್ತ, ಮೇಲೆ ಕೆಳಗೆ, ಸಲೀಸಾಗಿ ಹಾರುವುದೋ ಹಾಗೆಯೇ ಈ ದುರ್ಗೆಯು ದುಷ್ಟರ ಸಂಹಾರ ಮಾಡಲು, ಅವರು ಯುದ್ಧ ರಂಗದಲ್ಲಿ ಎಲ್ಲೆಲ್ಲಿ ಸರಿಯುವರೋ ಅಲ್ಲೆಲ್ಲ ತಾನೂ ಸರಿದು ಹೋಗುವಳಂತೆ. ಆದ ಕಾರಣ ಇಲ್ಲಿ ಚೆಂಡಿನ ಉಪಮೆ ಬಂದಿದೆ.

### ಉತ್ತರ ಕರ್ನಾಟಕ :

ಶ್ರೀವಾದಿರಾಜರು ವರ್ಣಿಸಿದ ಕ್ಷೇತ್ರಗಳಲ್ಲಿ ಉತ್ತರ ಕರ್ನಾಟಕದವು ಕೆಲವಿವೆ. ಅವುಗಳಲ್ಲಿ ಬಿದರಹಳ್ಳಿ ಕ್ಷೇತ್ರದ (ಧಾರವಾಡ ಜಿಲ್ಲೆ) ವರ್ಣನೆ ಗಣನೀಯವಾಗಿದೆ. ಅಲ್ಲಿ ಸೋಮೇಶ್ವರನ ಹಾಗೂ ಅಶ್ವತ್ಥನಾರಾಯಣನ ದೇವಾ

ಲಯಗಳಿವೆ.* ಅಲ್ಲಿಯ ತುಂಗಭದ್ರಾ ನದೀತೀರದ ಮೇಲ್ಗಡೆ ಒಂದು ಬೃಹತ್ ಅಶ್ವತ್ಥ ವೃಕ್ಷವಿದೆ. ಭಗವದ್ಗೀತೆ ಹಾಗೂ ಪುರುಷಸೂಕ್ತಗಳನ್ವಯ ಅಶ್ವತ್ಥ ವೃಕ್ಷದ ಬೇರುಗಳಲ್ಲಿ ಶ್ರೀಮನ್ನಾರಾಯಣನ ಪಾದಗಳು, ಅದರ ಮಧ್ಯ ಭಾಗದಲ್ಲಿ (ಬೊಡ್ಡೆಯಲ್ಲಿ) ಅವನ ಉದರ, ಕೊಂಬೆಗಳಲ್ಲಿ ಕೈಗಳು, ತುದಿಗಳಲ್ಲಿ ಅವನ ಅನಂತಾನಂತ ಮುಖಗಳು– ಇವನ್ನು ಅನುಸಂಧಾನ ಮಾಡಲಾಗುತ್ತದೆ. ಅಂತೂ ವೃಕ್ಷಗಳಲ್ಲಿ ಶ್ರೇಷ್ಠತಮವಾದದ್ದು ಅಶ್ವತ್ಥ ವೃಕ್ಷವೇ– ಎಂಬುದು ನೆಲೆಗೊಂಡ ಅಂಶವಾಗಿದೆ. 'ಹೀಗಿರುವುದರಿಂದ ನೀವು ಉತ್ತರ ಭಾರತದ ಪುಣ್ಯಕ್ಷೇತ್ರಗಳ ದರ್ಶನಕ್ಕಾಗಿ, ಅಲ್ಲಿಯ ತನಕ ಹೋಗುವ ಪ್ರಯಾಸವನ್ನೇಕೆ ಕೈಕೊಳ್ಳುತ್ತೀರಿ ? ಇಲ್ಲಿಗೆ ಬಂದರೆ ನಿಮ್ಮ ಇಷ್ಟಾರ್ಥ ಸಿದ್ಧಿ ನಿಶ್ಚಿತ ? ಎಂಬುದಾಗಿ ವಾದಿರಾಜರು ಪ್ರತಿಪಾದಿಸಿದ್ದಾರೆ.*

ಬಿದಿರಹಳ್ಳಿಗೆ ಬಂದರೆ, ಅಲ್ಲಿಯ ಅಶ್ವತ್ಥ ವೃಕ್ಷವು ನಮ್ಮ ಜನ್ಮಜನ್ಮಾಂತರದ ದುಷ್ಕೃತ್ಯಗಳನ್ನು ಕಿತ್ತು ಬಿಸುಡುವುದು– ಎಂಬುದಕ್ಕೆ ವಾದಿರಾಜರು ಕೊಟ್ಟಿರುವ ಉಪಮೆ ಹೃದ್ಯವಾಗಿದೆ. ಅದರ ಎಲೆಗಳು, ಬಳಿಯಲ್ಲಿಯೇ ಹರಿಯುವ ತುಂಗಭದ್ರೆಯ ಮೇಲ್ಗಡೆ ಬೀಸುವ ಗಾಳಿಯಿಂದಾಗಿ ಅವು ಸದಾ ಚಲಿಸುತ್ತಿವೆಯಷ್ಟೆ. ಅವು ನಮ್ಮ ಪಾಪ ಕೃತ್ಯಗಳನ್ನು ಆಮೂಲಾಗ್ರವಾಗಿ ಕಿತ್ತು ಬಿಸುಡ ಹೊರಟ ಕೈಬೆರಳುಗಳಂತಿವೆಯಂತೆ! ಈ ಉಪಮೆಯಲ್ಲಿ ಉತ್ಪ್ರೇಕ್ಷಾಲಂಕಾರವೂ ಸೇರಿದೆಯಲ್ಲವೆ. ಮತ್ತು ಆ ಶ್ಲೋಕದ ಅನುಪ್ರಾಸಯುಕ್ತ ರಚನೆಯೂ ಅಷ್ಟೇ ಮಧುರವಾದುದು :

---

* ಈ ದೇವಾಲಯಗಳ ಅದ್ಭುತ ಶಿಲ್ಪಕಲೆಯನ್ನು ಫರ್ಗ್ಯೂಸನ್ ತನ್ನ Chalukyan Architecture ಎಂಬ ಉದ್ಗ್ರಂಥದಲ್ಲಿ ವಿಶೇಷವಾಗಿ ವರ್ಣಿಸಿದ್ದಾನೆ.

* ಇಷ್ಟಾರ್ಥ ಸಿದ್ಧಿಗಾಗಿ ಅಶ್ವತ್ಥ ವೃಕ್ಷಕ್ಕೆ ಏಳು ಸುತ್ತು ಪ್ರದಕ್ಷಿಣೆ ಹಾಕಬೇಕು, ಎಂಬುದರ ಪ್ರಸ್ತಾಪವು 'ಬಹುದೂರ ಮುಕ್ತಿ ಪಥದಿ ನಡೆದು ನೀವು ಹೋಹುದನಳವಡಿಸಿ ಕೊಳ್ಳಿಕೊ'. ಎಂಬ ಕನ್ನಡ ಹಾಡಿನಲ್ಲಿ ಬಂದಿದೆ :

ಏಕಂ ವಿನಾಯಕೇ ಕುರ್ಯಾದ್ ದ್ವೇ ಸೂರ್ಯೇ ತ್ರೀಣಿ ಶಂಕರೇ
ಚತ್ವಾರಿ ಕೇಶವೇ ಕುರ್ಯಾತ್ ಸಪ್ತಾಶ್ವತ್ಥ ಪ್ರದಕ್ಷಿಣೆ ಮಾಡಿರೊ.

ತುಂಗಾತರಂಗ ಪರಿವರ್ತನ ಪೂತವಾತ
ಸಂಗೇನ ತೇsಂಘ್ರಿಪ ದಲಾನಿ ಚಲಂತಿ ಭಾಂತಿ
ಜನ್ಮಾಂತರೋತ್ಥ ದೃಢಮೂಲ ದುರಂತ ದುಷ್ಕೃ
ತ್ಯುನ್ಮೂಲ ನೋದ್ಯತ ಕರಾಂಗುಲಿ ಕಾಂತಿಮಂತಿ (ಪ. ಪ್ರ. ೬೭)

ಉತ್ತರಕನ್ನಡ ಜಿಲ್ಲೆಯ ಮಂಜುಗುಣಿಯಲ್ಲಿ ಸುಪ್ರಸಿದ್ಧ ವೆಂಕಟೇಶ್ವರ ದೇವಾಲಯವಿದೆ. ಸಂಚಾರತ್ವೇನ ವಾದಿರಾಜರು ಮಂಜುಗುಣಿಯ ಈ ವೆಂಕಪ್ಪನನ್ನು ಕಂಡರು. ಆದರೆ ಇವನಿಗೂ, ತಿರುಪತಿಯಲ್ಲಿರುವ ಆಕೃತಿಗೂ ವ್ಯತ್ಯಾಸವಿದೆ. ಮಂಜುಗುಣಿಯ ವೆಂಕಟಪತಿಯು ಕೈಯಲ್ಲಿ ಬಿಲ್ಲು. ಬಾಣಾದಿಗಳನ್ನು ಹಿಡಿದಿದ್ದಾನೆ. ಕಾಲಲ್ಲಿ ಪಾದುಕೆಗಳಿವೆ. ಎಲ್ಲೋ ಬೇಟೆಗೆ ಹೋಗಿ ಬಂದಂತೆ ಕಾಣ್ತದೆ ? ಹೌದು; ದುಷ್ಟರೆಂಬ ಮೃಗಗಳನ್ನು ಸಕಲ ಭುವಿಯನ್ನೇ ಸುತ್ತಿದ್ದಾನೆ. ಮಧ್ಯೆ ಮಂಜುಗುಣಿಗೆ ಬಂದನಂತೆ. ಅಲ್ಲಿಯ ಸೌಂದರ್ಯವನ್ನು ನೋಡಿ ಮುಂದೆ ಹೋಗದೆ ನಿಂತು ಬಿಟ್ಟ. ಅವನು ಎಷ್ಟೊಂದು ಮೋಹಗೊಂಡ ಎಂದರೆ, ತನ್ನ ಪಾದುಕೆಗಳನ್ನು ಕಳಚುವುದಕ್ಕೂ ಮರೆತುಬಿಟ್ಟ! ಇಂತಿದು ವಾದಿರಾಜೀಯ ಕಲ್ಪನೆ.

**ಪಂಢರಪುರ :**

ಇನ್ನು ಪಂಢರಪುರ. ಅಲ್ಲಿಯ ವಿಠ್ಠಲ ಮೂರ್ತಿಗೆ ತನ್ನದೇ ಆದ ವಿಶಿಷ್ಟ ರೂಪವಿದೆಯಷ್ಟೆ. ಟೊಂಕದ ಮೇಲೆ ಕೈಗಳಿವೆ. ಕಾಲುಗಳತ್ತ ತೋರಿಸುವಂತಿರುವ ಬೆರಳುಗಳು. ಕಾಲ್ಗಳ ನಡುವೆ ದಂಡವಿದೆ. ಅಲ್ಲದೆ ಮೈಮೇಲೆ ವಸ್ತ್ರವಿಲ್ಲ. ಇವು ಒಂದೊಂದಕ್ಕೂ ವಾದಿರಾಜರು ವಿಶಿಷ್ಟ ಅರ್ಥವನ್ನು ಕಲ್ಪಿಸಿದ್ದಾರೆ. ಅವರ ಪ್ರಕಾರ ವಿಠ್ಠಲನು ಹೇಳುತ್ತಿದ್ದಾನೆ : 'ಎಲೆ ಮನುಜಾ, ನನ್ನನ್ನು ಧ್ಯಾನಿಸಿದರೆ, ಸಂಸಾರ ಸಮುದ್ರವು ಈ ಟೊಂಕದ ವರೆಗೆ ಮಾತ್ರ ಉಳಿಯುವುದು. ಎಂದರೆ ನೀನು ಎಂದಿಗೂ ಮುಳುಗುವುದಿಲ್ಲ. ನನ್ನ ಪಾದ ಕಮಲಗಳನ್ನು ಭಜಿಸು, ಹಾಗೆ ಮಾಡದಿದ್ದರೆ, ಇಕೋ ಇಲ್ಲಿ ದಂಡವಿದೆ!'

ಈ ಪಂಢರಪುರದ ಬಾಲಗೋಪಾಲನನ್ನು ವಾದಿರಾಜರು ಬಗೆಬಗೆಯಾಗಿ ಸ್ತುತಿಸಿದ್ದು ಅವರು ರಚಿಸಿದ ಈ ಶ್ಲೋಕವು ಅನೇಕರಿಗೆ ನಿತ್ಯಪಾರಾಯಣದ ಸ್ತೋತ್ರವಾಗಿದೆ.

ಪಾಪಾವಲೀ ಪಾಪನ ಪಟ್ವ ಪಾಂಗಃ
ಶ್ರೀಪಾಣಿ ಪದ್ಮಾಂಚಿತ ಜಾನುಜಂಘಃ
ಗೋಪಾಲಬಾಲಃ ಕೃಪಯಾ ಸ್ವಯಂನಃ
ಶ್ರೀಪಾಂಡುರಂಗೋ ಭವತು ಪ್ರಸನ್ನಃ (ಉ. ಪ್ರ. ೨)

## ಉತ್ತರಯಾತ್ರೆ

ಪಂಢರಪುರದಿಂದ ಮುಂದೆ ವಾದಿರಾಜರು ನೇರವಾಗಿ ಉತ್ತರಕ್ಕೇ ಸಾಗಿದ್ದಾರೆ. ಅವರ ಉತ್ತರ ಪ್ರಬಂಧದಲ್ಲಿ ಬಂದಿರುವ ಕ್ಷೇತ್ರಗಳು, ಅಲ್ಲಿಯ ದೈವತಗಳು ಬಹಳವೇನಿಲ್ಲ. ಆ ಕ್ಷೇತ್ರಗಳೆಂದರೆ ಪ್ರಯಾಗ, ಕಾಶಿ, ಗಯಾ, ಮಥುರಾ, ಅಯೋಧ್ಯೆ, ಹಸ್ತಿನಾಪುರ ಹಾಗೂ ಬದರಿಕ್ಷೇತ್ರ. ಕೆಲವದರ ವರ್ಣನೆಯನ್ನು ಮಾತ್ರ ಇಲ್ಲಿ ಗಮನಿಸಲಾಗಿದೆ.

**ಮಥುರಾ :**

ಮಥುರಾದಲ್ಲಿ ಯಮುನಾ ನದಿ ಹರಿಯುತ್ತಿದೆಯಷ್ಟೆ. ಅಲ್ಲಿಯ ಸ್ನಾನದ ಘಟ್ಟಗಳಲ್ಲಿ ವಿಶ್ರಾಂತಿ ತೀರ್ಥ ಎಂಬುದಿದೆ. ಶ್ರೀ ಕೃಷ್ಣನು ಕಂಸನನ್ನು ಸಂಹರಿಸಿದ ಬಳಿಕ ಇಲ್ಲಿ ಬಂದು ವಿಶ್ರಾಂತಿ ಪಡೆದನೆಂಬ ಪೌರಾಣಿಕ ಪ್ರತೀತಿಯಿಂದಾಗಿ ಆ ಹೆಸರು, ಆದರೆ ವಾದಿರಾಜರ ಪ್ರಕಾರ ಕಲಿಯುಗದಲ್ಲಿ ಅದು ಅನ್ವರ್ಥಕವಾಗದು. ಯಾಕಂದರೆ ಈ ತೀರ್ಥ ಸ್ಥಳಕ್ಕೆ ವಿಶ್ರಾಂತಿಯೆಂಬುದೇ ಇಲ್ಲ–ಭಕ್ತ ಜನರಿಗೆ ಏಕಪ್ರಕಾರವಾಗಿ ಪುಣ್ಯಫಲವನ್ನು ಕೊಡುತ್ತಲೆ ಇರುವುದರಿಂದ. ಇಷ್ಟೇ ಅಲ್ಲ ಪಾಪಿಗಳಿಗೆ ಅದು ಶ್ರಾಂತಿಯನ್ನುಂಟು ಮಾಡಬಲ್ಲದು.

**ಅಯೋಧ್ಯೆ :**

ಅಯೋಧ್ಯೆಯ ವರ್ಣನೆ ಒಂದೇ ಪದ್ಯದಲ್ಲಿ ಮುಗಿಯುತ್ತದೆಯಾದರೂ ಸೊಗಸಾಗಿದೆ. ಭರತನು ಶ್ರೀರಾಮನ ಪಾದುಕೆಗಳನ್ನು ಇಟ್ಟು ಪೂಜಿಸುತ್ತಿದ್ದನೆಂಬ ಒಂದು ಸಣ್ಣ ಅಂಶವನ್ನು ವಿಸ್ತರಿಸಿ ವಾದಿರಾಜರು ಅದನ್ನು ವರ್ಣಿಸಿದ್ದಾರೆ. ಅವರಿಗೆ ಈ ಅಯೋಧ್ಯೆಯು ಓರ್ವ ಪತಿವ್ರತೆಯಂತೆ ಕಂಡಿದೆ. ಯಾಕೆಂದರೆ ದೇಶಾಂತರಕ್ಕೆ ಹೋದ ಗಂಡನು ಒಂದು ಕುರುಹನ್ನು ತನ್ನ ಬಳಿ

ಇಟ್ಟುಕೊಂಡು ಅದನ್ನು ಗೌರವದಿಂದ ಕಾಣುವುದು ಹಿಂದಿನ ಭಾರತೀಯ ನಾರಿಯರ ಸತ್ಸಂಪ್ರದಾಯವಷ್ಟೆ. ಈ ಅಯೋಧ್ಯಾನಗರಿಯು, ಕಾಡಿಗೆ ಹೋದ, ಪತಿಸಮಾನನಾದ ಶ್ರೀರಾಮನ ಪಾದುಕೆಗಳನ್ನು ಅಂಥದೇ ಪೂಜ್ಯಭಾವದಿಂದ ಕಂಡಿತಲ್ಲವೆ.

**ಕುರುಕ್ಷೇತ್ರ :**

ಕುರುಕ್ಷೇತ್ರವೆಂಬ ಹೆಸರು ನಮಗೆಲ್ಲ ಪರಿಚಿತ. ಅದನ್ನು ಧರ್ಮಕ್ಷೇತ್ರವೆಂದು (ಧರ್ಮಕ್ಷೇತ್ರೆ ಕುರುಕ್ಷೇತ್ರೇ ಭಗವದ್ಗೀತೆಯಲ್ಲಿ ಕರೆದದ್ದರ ಕಾರಣವೆಂದರೆ, ಅಲ್ಲಿ 'ಕುರು' ಎಂಬ ರಾಜನು ಅಧ್ಯಾತ್ಮ ವಿದ್ಯೆ ಮತ್ತು ಅಷ್ಟಾಂಗವಿದ್ಯೆಗಳನ್ನು ಕೃಷಿಮಾಡಲೆಂದು ಭೂಮಿಯನ್ನು ಹರಗಿದುದು. ಆಮೇಲೆ ಈ ಸ್ಥಳವು ಮಹಾಭಾರತದ ಯುದ್ಧದಿಂದಾಗಿ ಪುನಃ ಪ್ರಸಿದ್ಧಿ ಪಡೆಯಿತು. ಭೂಮಿಯನ್ನು ಹರಗುವ ಆ ಕುರುರಾಜನ ಕ್ರಿಯೆಯನ್ನು ನೆಪಪಾಗಿರಿಸಿ ವಾದಿರಾಜರು ಆದಕ್ಕೆ ಸಮನಾದ ಬೇರೊಂದು ಕ್ರಿಯೆಯನ್ನು ಲಾಕ್ಷಣಿಕವಾಗಿ ಹೀಗೆ ಹೇಳಿದ್ದಾರೆ.

ಪಂಚಪಾಂಡವರಲ್ಲಿ ಭೀಮಸೇನನೇ ಕೌರವ ಸೈನ್ಯ ಬಲವನ್ನು ಹೆಚ್ಚಿನ ಮಟ್ಟಿಗೆ ನಾಶ ಮಾಡಿದವನು. ಅನಂತರದ ಖ್ಯಾತಿ ಅರ್ಜುನನದು. ಭೀಮಸೇನನು ತನ್ನ ಗದಾಪ್ರಹಾರದಿಂದ ಆನೆ, ಕುದುರೆ, ಕಾಲಾಳುಗಳೆಂಬ ಹೆಂಟೆಗಳನ್ನು ಪುಡಿ ಮಾಡಿ ಭೂಮಿಯನ್ನು ಹರಗಿದನಂತೆ! ಯಾತಕ್ಕಾಗಿ ? ಅರ್ಜುನನು ತನ್ನ ಬಾಣಗಳೆಂಬ ಸಸ್ಯಗಳನ್ನು ನೆಡುವುದಕ್ಕೆ ! ಇಂಥ ಕ್ಷೇತ್ರದಲ್ಲಿ, ಈ ಹಿಂದೆ ಧರ್ಮದ ಬೆಳೆ ತೆಗೆದದ್ದಾದರೆ, ಈಗ ಬೆಳೆದದ್ದು ಸತ್ಕೀರ್ತಿಯನ್ನು ಆ ಶ್ಲೋಕ ಹೀಗಿದೆ ।

ಶ್ರೀಭೀಮಸೇನ ಕರಕಂಜ ಗದಾ ಪ್ರಹಾರೈಃ
ಚೂರ್ಣೀಕೃತಾಶ್ವಗಜಪತ್ತಿ ಮೃದುಗ್ರ ಪಿಂಡಂ
ಉತ್ಖಾತ ಪಾರ್ಥ ಶರಸಸ್ಯ ಪದಂ ಕುರೂಣಾಂ
ಕ್ಷೇತ್ರಂ ದಿಶಾಸು ವಿತತಾನ ಸುಕೀರ್ತಿ ಧಾನ್ಯಮ್. (ಉ. ಪ್ರ. ೩೮)

## ಪೂರ್ವ ದಿಕ್ಕಿನಲ್ಲಿ

ಶ್ರೀ ವಾದಿರಾಜರ ಪೂರ್ವ ದಿಕ್ಕಿನ ಯಾತ್ರೆಯು ಪುರಿಯಿಂದ ಪ್ರಾರಂಭವಾಗಿ ಕುಂಭಕೋಣದ ವರೆಗೆ ಬಂದು ಮುಟ್ಟುತ್ತದೆ. ಅದರಲ್ಲಿ ದಕ್ಷಿಣ-ಮಧ್ಯ ಭಾರತದ ಹಂಪಿ, ಆನೆಗೊಂದಿಗಳೂ ಸಮಾವೇಶಗೊಂಡಿವೆ. ಹಾಗೆ ವರ್ಣಿತವಾಗಿರುವ ಕ್ಷೇತ್ರಗಳಲ್ಲಿ ಅಹೋಬಲ, ತಿರುಪತಿ, ಕಾಂಚಿ ತಿರುವಣ್ಣಾಮಲೈ ತಿರುಕೊಯಿಲೂರು ಮತ್ತು ವೃದ್ಧಾಚಲ ಇವನ್ನೂ ಸೇರಿಸಬೇಕು. ಬೇಲೂರಿನ ಚೆನ್ನಕೇಶವನ ವರ್ಣನೆಯು ಅವರ ಕನ್ನಡ ಹಾಡುಗಳಲ್ಲಿ ವಿಶೇಷವಾಗಿ ಬಂದಿದೆ. ಆದರೆ ಇಲ್ಲಿ ಮಾತ್ರ ಬೇಲೂರು ಸಮಾವೇಶಗೊಂಡಿಲ್ಲ. ಇರಲಿ ಪ್ರಕೃತ ಕೆಲವು ವರ್ಣನೆಗಳಲ್ಲಿಯ ಕಲ್ಪನಾವಿಲಾಸವನ್ನು ಪರಿಶೀಲಿಸೋಣ.

ಮೊದಲಿಗೆ ಹಂಪಿ, 'ಪಂಪಾ' ಎಂಬ ನಾಮದ ಉಚ್ಚಾರ ಮಾತ್ರದಿಂದಲೇ ಪಾಪ (ಪಾಪಂ) ಎನ್ನುವುದು ತಿರುವು ಮುರುವಾಗಿ ನಾಶವಾಗುತ್ತದಂತೆ! ಇನ್ನು ಅಲ್ಲಿಯ ವಿರೂಪಾಕ್ಷ. ಅವನು ಸಜ್ಜನರಿಗೆ ಸಂಪತ್ತನ್ನು ಕೊಡಲಿ ಎಂದು ವಾದಿರಾಜರು ಕೇಳಿಕೊಳ್ಳುತ್ತಾರೆ. ಸಂಪತ್ತೇ ಏಕೆಂದರೆ ಬಳಿಯಲ್ಲಿಯ ಹೇಮಕೂಟ ಎಂದರೆ ಬಂಗಾರದ ಪರ್ವತವೇ ಇದೆಯಲ್ಲ!

ಇದೀಗ ಪಂಢರಪುರದ ವಿಟ್ಠಲನ ವರ್ಣನೆಯನ್ನು ನೋಡಿದ್ದೇವೆ. ಇಲ್ಲಿಯೂ ಅಷ್ಟೇ ಸುಪ್ರಸಿದ್ಧನಾದ ವಿಟ್ಠಲನಿದ್ದಾನೆ. ಎಂದರೆ ಗುಡಿ ಇದೆ. ಮೂರ್ತಿ ಇಲ್ಲ. ಪಾವಚಿಹ್ನೆಗಳು ಮಾತ್ರ ಇವೆ.

ಶ್ರೀವಾದಿರಾಜರ ಕಾಲಕ್ಕೆ ಜನಜನಿತವಾಗಿದ್ದರ ಪ್ರಕಾರ, ವಿಟ್ಠಲನು ಉತ್ತರದ ಕಡೆಯಿಂದ ಬಂದು, ಪಂಢರಪುರವನ್ನು ಸೇರಿದ್ದಲ್ಲಿಯೆ ಅವನ ವೇಷವು ವಿಶಿಷ್ಟವಾದದ್ದೇ. ಹೀಗೆ ವೇಷ ಮರೆಯಿಸಿ, ಅಲ್ಲಿಂದ ಇಲ್ಲಿಗೆ, ಇಲ್ಲಿಂದ ಅಲ್ಲಿಗೆ ಅಡ್ಡಾಡುವುದು ಚೋರರ ವ್ಯವಹಾರವೇ ಆಯಿತು! ಹೌದು, ಬಹುಕಾಲದಿಂದ ಹೀಗೆ ಮಾಡುತ್ತಲೇ ಇದ್ದಾನೆ. ದ್ವಾಪರ ಯುಗದಲ್ಲಿ ಈ ವಿಟ್ಠಲ ಯಾನೆ ಬಾಲಗೋಪಾಲ ಬೆಣ್ಣೆ ಮೊದಲಾದವುಗಳನ್ನು ಕದ್ದ. ಅಂತೆಂದು

ತಾಯಿ ಯಶೋಧೆ ಅವನನ್ನು ಕಟ್ಟಿ ಹಾಕಿದಳು. ಆಗ ತಪ್ಪಿಸಿಕೊಂಡು ಈ ಕಳ್ಳ ಕೃಷ್ಣ ಓಡಿಬಿಟ್ಟ. ಈಗ ಮತ್ತೆ ಕಳ್ಳತನ ಮಾಡಿದ. ಏನನ್ನು ? ಜ್ಞಾನಿಗಳು ತಿಳಿಯದೆ ಮಾಡಿದ ಪಾಪ ರಾಶಿಯನ್ನು ! ಆಗ ಅವರು ಅವನನ್ನು ತಮ್ಮ ಹೃದಯದಲ್ಲಿ ಬಂಧಿಸಿ ಇಟ್ಟರು. ಆದರೇನು ? 'ಬಂಧನ' ಎನ್ನುವುದು ಅವನಿಗೆ ಎಂದಾದರೂ ಒಗ್ಗೀತೆ ! ಅವರಲ್ಲಿಂದ ತಪ್ಪಿಸಿಕೊಂಡು ಪಂಢರಪುರಕ್ಕೆ ಬಂದ ಅದೂ ವೇಷ ಮರೆಸಿ. ಪಂಢರಪುರದ ಈ ಬಾಲಗೋಪಾಲ ಗೊಲ್ಲರವನ ವೇಷದಲ್ಲಿದ್ದ ಹಾಗೆ ಕಾಣುವುದು, ತಾನೆ. ಆದರೆ ಅಲ್ಲಿಯೂ ಒಬ್ಬ ಭಕ್ತ–ಪುಂಡರೀಕ ಇವನ ಗುರುತನ್ನು ಹಿಡಿದು ಬಿಟ್ಟ. ಪುನಃ ಪಲಾಯನ ಈ ಬಾರಿ ವಿಜಯನಗರಕ್ಕೆ.

ವಿಠ್ಠಲನ ಮೂರ್ತಿ ವಿಶೇಷತೆಯನ್ನು ನಿಮಿತ್ತವಾಗಿರಿಸಿ ವಾದಿರಾಜರು ಏನೆಲ್ಲ ಕಲ್ಪನೆಯ ಕುದುರೆಯನ್ನು ಓಡಿಸಿದ್ದಾರೆ. ಇನ್ನು ಅದಕ್ಕೊಂದು ಮುಕ್ತಾಯ ಬೇಕಲ್ಲ. ವಾದಿರಾಜರು "ಇಕೋ, ನನ್ನನ್ನೂ ಹೀಗೆ ಪಾಪ ಮುಕ್ತನನ್ನಾಗಿ ಮಾಡು. ಮಾಡದೇ ಹೋದೆಯೋ, ನಿನ್ನ ಹಿಂದಿನ ಚೋರ ವೃತ್ತಿಯನ್ನು, ವೇಷ ಮರೆಯಿಸಿದ ಗುಟ್ಟನ್ನು ರಟ್ಟು ಮಾಡುವೆ" ಎಂದು ಹೇಳುತ್ತಾನೆ. ಈ ಕುರಿತ ಮೂಲ ಶ್ಲೋಕವನ್ನೇ ಮೆಲಕು ಹಾಕುವುದು ಮೇಲು :_

ಚೌರ್ಯಾನ್ಮಾತೃನಿಬದ್ಧ ಚಾರುಚರಣಃ ಪಾಪೌಘ
ಚೌರ್ಯಾತ್ ಬುಧೈಃ
ಬದ್ಧಃ ತ್ವಂ ಪಥಿ ಪುಂಡರೀಕ ಮುನಿನಾ ಜಾರೇ ತಿ–
ಸಂಬೋಧಿತಃ
ತುಂಗಾತೀರಗತೋಽಸಿ ವಿಟ್ಠಲ ದಿಶನ್ ಅನ್ಯಾಕೃತಿಃ
ವಾಂಛಿತಂ
ವೇತ್ತ್ಯಕ್ಷ್ಯಾಂ ಯದಿ ಮೇ ನ ದಾಸ್ಯಸಿ ತದಾ
ತ್ವತ್ಸಂಸ್ಥಿತಿ: ಕಥ್ಯತೇ.* (ಪೂ. ಪ್ರ. ೧೩)

* ತುಂಗಾತೀರಗತ : ಅಸಿ ಎಂದಿರುವುದರಿಂದ ವಾದಿರಾಜರ ಕಾಲಕ್ಕೆ ವಿಟ್ಠಲನ ಮೂರ್ತಿ ಸಕ್ಕೃತ್ ಆಗಿ ಇದ್ದಿತೆ ? ಎಂಬ ಸಂಶಯ ಬರುತ್ತದೆ. ಆ ಮೇಲೆ, ಎಂದರೆ ತಾಳೀಕೋಟೆಯ ಯುದ್ಧಾನಂತರ ಅದು ವಿಧ್ವಂಸವಾಗಿರಬಹುದೆ ? ಈಗಂತೂ ಅಲ್ಲಿ ಮೂರ್ತಿ ಇರದೆ, ಬರಿಯ ಪಾದ ಚಿಹ್ನೆ ಉಳಿದಿದೆ.

ಶ್ರೀ ವಾದಿರಾಜರು ಅಹೋಬಲ ನರಸಿಂಹನನ್ನು ಐದಾರು ಶ್ಲೋಕಗಳಲ್ಲಿ ಮನದುಂಬಿ ವರ್ಣಿಸಿರುವುದರಿಂದ ಈ ಕ್ಷೇತ್ರವೂ ಅವರ ಅಚ್ಚುಮೆಚ್ಚಿನ ಸ್ಥಳ ವಾಗಿರಬಹುದು. ಒಂದು ಶ್ಲೋಕದಲ್ಲಿ ಸೊಗಸಾದ ಶ್ಲೇಷೆಯನ್ನು ತಂದಿದ್ದಾರೆ. ಆ ಸಂದರ್ಭವು ಪರಿಚಿತವಾದ ನರಸಿಂಹಾವತಾರದ್ದೆ :

ಯಾವ ನರಸಿಂಹನು 'ಸ್ತಂಭ'ದಲ್ಲಿ ಪ್ರಕಟವಾದನೋ, 'ಸ್ತಂಭ' ದಂತೆ ಅಜ್ಞಾನಿಯಾದ ನನ್ನಲ್ಲಿ ಪ್ರಕಟವಾಗಲಿ. ಯಾವ ನರಸಿಂಹನು ಅಹೋಬಲದ ಬಳಿ ಹರಿಯುವ 'ಭವನಾಶಿನಿ' ನದೀ ತೀರದಲ್ಲಿ ನೆಲಸಿದನೋ ಆ ನರಸಿಂಹನು ನನ್ನ ಭವವನ್ನು ನಾಶ ಮಾಡಲಿ. ಯಾರು ಪ್ರಲ್ಹಾದನನ್ನು ಆತ ಬಾಲಕನಿದ್ದರೂ ಕಾಪಾಡಿದನೋ ಆ ನರಸಿಂಹನು 'ಬಾಲಿಶ' ನಿರುವ ನನ್ನನ್ನೂ ಕಾಪಾಡಲಿ.

ಅನಂತರದ ವರ್ಣನೆ ತಿರುಪತಿಯ ವೆಂಕಟೇಶನದು. ಉಡುಪಿಯ ಶ್ರೀಕೃಷ್ಣನ ತರುವಾಯ ಈ ವೆಂಕಟಪತಿಯೇ ಪ್ರಮುಖನೆನಿಸಿದ್ದಾನೆ. ಶ್ರೀ ವಾದಿ ರಾಜರ ಕನ್ನಡ ಕೃತಿಗಳಲ್ಲಿಯೂ ಯಥೇಚ್ಛವಾಗಿ ಕಾಣಿಸಿಕೊಂಡಿದ್ದಾನೆ. ತಿರು ಪತಿಯ ಬೆಟ್ಟವನ್ನೇರುವಾಗ, ಅದರ ಮೆಟ್ಟಿಲುಗಳಲ್ಲಿಯೂ ಅವನ ಸಾನಿಧ್ಯ ವನ್ನು ಅನುಭವಿಸಿದ್ದ ವಾದಿರಾಜರು ಪ್ರಕೃತದ ಸಂದರ್ಭದಲ್ಲಿ ಅವನನ್ನು ಭಾವ ನಿರ್ಭರವಾಗಿ ವರ್ಣಿಸಿದ್ದಾರೆ. ಒಂದು ಶ್ಲೋಕದಲ್ಲಿಯಂತೂ ಅವರು ಹೊರ ಹೊಮ್ಮಿಸಿದ ಕಲ್ಪನೆ ಅತ್ಯಂತ ಸುಂದರವಾಗಿದೆ :

ವೆಂಕಪ್ಪನಿಗೂ ಸಂಪತ್ತಿಗೂ ವಿಶೇಷವಾದ ಅನ್ಯೋನ್ಯ. ಭಕ್ತರು ತಾವು ಗಳಿಸಿದ ಸಂಪತ್ತನ್ನು ಅವನಿಗೆ ನೀಡುತ್ತಾರೆ. ಹಾಗೇ ಅವರ ಸಂಪಾದನೆ ಬೆಳೆ ಯುತ್ತಲೇ ಹೋಗುತ್ತದೆ. ಇದರರ್ಥ ಲಕ್ಷ್ಮೀಯು ಭಕ್ತರ ಮನೆಯಲ್ಲಿ ಸದಾ ವಾಸಿಸುತ್ತಾಳೆ. ಎಂದಾಯಿತು, ಅವಳನ್ನು ಮರಳಿ ಪಡೆಯುವ ಆಸೆಯಿಂದ ವೆಂಕಪ್ಪನು ಭಕ್ತರ ಅಭೀಷ್ಟೆಗಳನ್ನು ಪೂರೈಸುತ್ತಾನೆ. ಆದರೆ ಅದರದ್ದೂ ವಿಪರೀತ ಪರಿಣಾಮ. ಎಂದರೆ ಲಕ್ಷ್ಮೀಯು ಭಕ್ತರಲ್ಲಿ ಇನ್ನಷ್ಟು ಸ್ಥಿರ! ಕೊನೆಗೆ ಉಪಾಯಗಾಣದೇ ತಾನೂ ಅವಳೊಟ್ಟಿಗೆ ಭಕ್ತರ ಮನೆಯಲ್ಲಿ ನೆಲನಿಂತ ನಂತೆ. ಭಕ್ತರು ಲಕ್ಷ್ಮೀ–ವೆಂಕಟೇಶ ಇಬ್ಬರನ್ನು ಕೂಡಿಯೇ ಆರಾಧಿಸುತ್ತಾರೆ– ಎಂಬುದೇ ಇಲ್ಲಿನ ತಾತ್ಪರ್ಯ.

**ಕಾಂಚಿಯಲ್ಲಿರುವ** ವರದರಾಜನಿಗೂ ಹೀಗೆಯೇ ಪತ್ನಿಯ ತಳಕು ಹಾಕಿದ್ದಾರೆ. ಅವನ ಮೂರ್ತಿ ಅತ್ಯಂತ ಸುಂದರ. ಅವನು ರಸಿಕನೆಂದೂ ಪ್ರತೀತಿ. ಇವೆರಡು ಅಂಶಗಳನ್ನು ಗಮನಿಸುತ್ತ ವಾದಿರಾಜರು ಊಹಿಸುವುದು ಹೀಗೆ : ಇವನು ರಸಿಕನೇ ಸರಿ. ಯಾಕಂದರೆ ಈತ 'ಕಾಂಚೀ' ವಾಸಿ. ಎಂದರೆ ಹೆಂಡತಿಯ ಒಡ್ಯಾಣದಲ್ಲಿ ; ಮಡದಿಗೆ ಹೊಂದಿಕೊಂಡೇ ಇರುವವ. ಕಾಂಚೀ ಪದದ ದ್ವ್ಯರ್ಥದ ಉಪಯೋಗವನ್ನು ವಾದಿರಾಜರು ಇಲ್ಲಿ ಮಾಡಿಕೊಂಡಿದ್ದಾರೆ.

## ದಕ್ಷಿಣ ಭಾರತ

ಇನ್ನೀಗ **ದಕ್ಷಿಣದ ಪ್ರಬಂಧ.** ಇತರ ಪ್ರಬಂಧಗಳಿಗೆ ಹೋಲಿಸಿದಾಗ ಇದು ತುಸು ಚಿಕ್ಕದು. ಇದರಲ್ಲಿ ವರ್ಣಿತಗೊಂಡ ಪ್ರಮುಖ ಕ್ಷೇತ್ರಗಳೆಂದು ಶ್ರೀರಂಗಮ್, ಧನುಷ್ಕೋಟಿ, ರಾಮೇಶ್ವರ ಮತ್ತು ತಿರುವನಂತಪುರಮ್–ಇವು ಗಳನ್ನು ಹೆಸರಿಸಬೇಕು.

**ಶ್ರೀರಂಗಮ್** ನಲ್ಲಿಯ ರಂಗನಾಥನನ್ನು ನಾನಾ ಪರಿಯಿಂದ ಸ್ತುತಿಸಿದ್ದಾರೆ ವಾದಿರಾಜರು. ರಂಗನಾಥನು ಇಲ್ಲಿ ಶೇಷಶಾಯಿ. ಶೇಷನಿಗೆ ಸಾವಿರ ಹೆಡೆಗಳು. ಆದರೆ ಇಲ್ಲಿರುವುದು ಐದೇ ! ಅದಕ್ಕೆ ವಾದಿರಾಜರ ಸಮರ್ಥನೆ ಇಂತಿದೆ : ಪಂಚವೇದಗಳನ್ನು ಪಠಿಸಲು ಐದು ಹೆಡೆಗಳು ಸಾಕಲ್ಲ ! ಉಳಿದವು ಅನವಶ್ಯಕ. ಮತ್ತೆ ಎರಡು ನಾಲಗೆಗಳಿವೆಯಷ್ಟೆ ? ಒಂದು ರಂಗಸ್ಥಾನ ನಾಮೋಚ್ಚಾರಕ್ಕೆ, ಮತ್ತೊಂದು ಈ ಕ್ಷೇತ್ರದ ಮಹಿಮೆಯನ್ನು ಸಾರುವುದಕ್ಕೆ !

ಶ್ರೀರಂಗಮ್‌ನಲ್ಲಿ ಚಂದಪುಷ್ಕರಿಣೀ ಎಂಬ ಸರೋವರವಿದೆ. ಚಂದ್ರನು ಇದರ ತಟದಲ್ಲಿ ಕುಳಿತು ತಪಸ್ಸು ಮಾಡಿದ್ದನೆಂಬ ಕಾರಣದಿಂದ ಈ ಉಪಾದೇಯ. ಹಾಗೇ ನೋಡಿದ್ದಾದರೆ ಚಂದ್ರನಿಗೆ ತನ್ನ ಬಳಿಯಲ್ಲಿಯೆ, (ಅದೂ ಶಿವನ ಶಿರಸ್ಸಿನ ಮೇಲೆ) ಗಂಗಾತೀರ ಇದ್ದಿತು. ಅದನ್ನು ಬಿಟ್ಟುಕೊಟ್ಟು ಇಲ್ಲಿಗೆ ತಪಸ್ಸಿಗಾಗಿ ಬಂದನೆಂದ ಮೇಲೆ ಈ ಸ್ಥಳದ ಮಹಾತ್ಮೆ ಎಷ್ಟಿರಬೇಡ ! (ಪೂ.ಪ್ರ.೯.)

ಮುಖ್ಯ ದೈವತವಾದ ರಂಗನಾಥನನ್ನಂತೂ ನಾನಾ ಪರಿಯಿಂದ ಸ್ತುತಿಸಿದ್ದಾರೆ. ಅವುಗಳಲ್ಲಿ ಇದೊಂದು ಕಲ್ಪನಾವಿಲಾಸವನ್ನು ನೋಡೋಣ. ಇಲ್ಲಿ

ರಂಗನಾಥರು ಸಯನಸ್ಥನಾಗಿದ್ದಾನೆ. ನಿದ್ದೆ ಮಾಡುವಂತಿದೆ. ಅದೇನು ಕಾರಣ ವಿರಬಹುದು ? ಪ್ರಾಯಶಃ ಉದರದಲ್ಲಿ ಇರಿಸಿಕೊಂಡಿದ್ದ ಬ್ರಹ್ಮಾಂಡದ ಭಾರ ದಿಂದಲೆ ? ಅಥವಾ ರಮಾದೇವಿಯ ಏಕಾಂತ ವಿಭ್ರಮದಿಂದ ಅರೆನಿದ್ರೆ ಯಾಗಿದ್ದು, ಅದನ್ನೀಗ ಪೂರೈಸಿಕೊಳ್ಳುತ್ತಿರಬಹುದೆ ? ಹೀಗೆ ಯಾಚಿಸಿದ ವಾದಿರಾಜರಿಗೆ 'ಛೇ, ಭಗವಂತನಿಗೆ ನಮ್ಮ ಹಾಗೆ ನಿದ್ರೆಯೆಂಬುದಿದೆಯೆ ? ಇದು ದೈಹಿಕ ನಿದ್ರೆಯಲ್ಲ, ಯೋಗ ನಿದ್ರೆಯೇ ಇರಬೇಕು' ಎಂದು ಹೇಳುತ್ತಾರೆ :

ಲಯೇ ಶಯಾನೋಪ್ಯುದರಸ್ಥ ಲೋಕ
ಭರೇಣ ಲಕ್ಷ್ಮೀಕರ ವಿಭ್ರಮೈಶ್ಚ
ಅನಿದ್ರಿತಾದ್ಯಾಂಘ್ರಿ ನಿಷೇವಣೇ ತಾಂ
ನಿಯುಜ್ಯ ನಿದ್ರಾಸಿ ಕಿಮಂಬುಜಾಕ್ಷ" (ಪೂ. ಪ್ರ. ೪)

ಈ ರಂಗನಾಥನಂತೆ ತಿರುವನಂತಪುರದಲ್ಲಿಯ ಅನಂತಪದ್ಮನಾಭನೂ ಶಯನಸ್ಥ; ಎಂದರೆ ಶೇಷಶಾಯಿ. ಆದರೆ ನಿದ್ರೆಯಲ್ಲಿಲ್ಲ. ಶೇಷನ ಮೇಲೆ ಒರಗಿದ್ದಾನೆ. ಅವನನ್ನು ಕಂಡು, ಭಕ್ತಿ ಪುರಸ್ಸರವಾಗಿ ವಾದಿರಾಜರು ಪ್ರಶ್ನಿಸು ತ್ತಿದ್ದಾರೆ :

ಎಲೈ ಪದ್ಮನಾಭನೇ, ನಿನ್ನ ನಾಭಿಯಿಂದ ಹೊರಟ ಪದ್ಮದಲ್ಲಿ ಮಗನಾದ ಬ್ರಹ್ಮನಿದ್ದು, ಆ ಪದ್ಮವು ಹೊರಳೀತೆಂಬ ಕಾಳಜಿಯೆ ? ಅಥವಾ ಮಗನ ಮೇಲೆ ವಾತ್ಸಲ್ಯವುಕ್ಕಿ ಬಂದು, ಬೇರೆಲ್ಲಿಯೂ ಹೋಗಲಾರದೆ ಉಳಿದಿದ್ದೀಯ ? ಇಲ್ಲವೆ ಶೇಷನ ಸುಕುಮಾರ ತ್ವಚೆಯು ನಿನಗೆ ಅಷ್ಟೊಂದು ಹಿತವೆನಿಸಿತೆ ? ಓಹೋ ! ಹಾಗೆ ಮಲಗಿರುವಾಗ ಲಕ್ಷ್ಮೀದೇವಿಯರು ಮಾಡುವ ಪಾದಸೇವೆ ನಿನಗೆ ಖುಶಿ ಕೊಟ್ಟಿತೆಂದೆ ?—ಎಂದು ಬಗೆಬಗೆಯಾಗಿ ಊಹಿಸುತ್ತಾರೆ. ಆದರೆ ಅವರಿಗೆ ಚೆನ್ನಾಗಿ ಗೊತ್ತು; ಸೃಷ್ಟಿ ಸ್ಥಿತಿಯನ್ನು ಕಾಯ್ದುಕೊಂಡು ಹೋಗ ಬೇಕಾದ ಮಹಾನ್ ಕಾರ್ಯದಲ್ಲಿ ನಿರತನಾದವಗೆ ವಿಶ್ರಾಂತಿ ಇಲ್ಲವೆಂದು. ಅಲ್ಲದೆ ಆ ದಯಾರ್ದ್ರ ಭಾವದಲ್ಲಿ ಕಿಂಚಿತ್ತೂ ನ್ಯೂನತೆ ಕಂಡು ಬರದು. ಹೌದು.

'ತಥಾ ಹಿ. ಕರುಣಾವಂತಃ ಪರಕಾರ್ಯ ಧುರಂಧರಾಃ (ದ. ಪ್ರ. ೪೩)

ಭಾರತದ ದಕ್ಷಿಣದ ತುದಿಯಲ್ಲಿ **'ರಾಮಸೇತು'** ಇದೆ. ಶ್ರೀರಾಮನು ಲಂಕೆಗೆ ಹೋಗುವುದಕ್ಕೆಂದು ಸಮುದ್ರಕ್ಕೆ ಕಟ್ಟಲು ತೊಡಗಿದ ಸೇತುವೆ ಅಲ್ಲಿದೆ. ಆ ಕಟ್ಟೋಣದಲ್ಲಿಯ ಒಂಬತ್ತು ಸ್ತಂಭಗಳು ಈಗಲೂ ನೋಡ ಸಿಗುತ್ತವೆ. ಆ ವರ್ಣನಾವಸರದ ಶ್ಲೋಕಗಳಲ್ಲಿ ಒಂದು ಮಾತ್ರ ವಿಶಿಷ್ಟವಾದುದು. ಎಂದರೆ ಉಳಿದವುಗಳಲ್ಲಿದ್ದಂತೆ ಕಲ್ಪನಾಲಹರಿ ಅಲ್ಲಿಲ್ಲ. ಹೀಗಿದೆ ಅವರ ಪ್ರಸಕ್ತಿ :

ವಾಯುವು ಎಂಥೆಂಥ ಮರಗಳನ್ನೂ ಉರುಳಿಸಬಲ್ಲನಾದರೂ ಪರ್ವತ ವನ್ನು ಅವನು ಕಿಂಚಿತ್ತೂ ಅಲ್ಲಾಡಿಸಲಾರ. ಇದು ಎಲ್ಲರಿಗೂ ತಿಳಿದ ವಿಚಾರವೇ. ಇದನ್ನೇ ಕಾಳಿದಾಸನು ಬೇರೊಂದು ಸಂದರ್ಭದಲ್ಲಿ 'ನ ಪಾದಪೋನ್ಮೂಲನಶಕ್ತಿ ರಂಹಃ ಶಿಲೋಚ್ಚಯೇ ಮೂರ್ಛತಿ ಮಾರುತಸ್ಯ.' ಎಂದು ಹೇಳಿದ್ದಾನೆ. (ರಘುವಂಶ_೨ನೇ ಸರ್ಗ).

ಆದರೆ ಇದು ಅಜ್ಞಾನ ಮೂಲವಾದದ್ದು (ಅಜ್ಞವಾಕ್) ಎನ್ನುತ್ತಾರೆ, ವಾದಿರಾಜರು ! ಏಕೆಂದರೆ ವಾಯುದೇವರು ಪರ್ವತಗಳ ಸಮೂಹವನ್ನೇ ಲೀಲಾಜಾಲವಾಗಿ ಎತ್ತಾಡಬಲ್ಲರು. ಇದಕ್ಕೆ ನಿದರ್ಶನ ಬೇಕೆ ? ಇಕೋ ಈ ರಾಮಸೇತು ಬಂಧನದ ಕಾಲಕ್ಕೆ ಬಳಸಲ್ಪಟ್ಟ ಪರ್ವತಗಳೇ ಸಾಕ್ಷಿ. ಆಳವಾದ ಸಮುದ್ರವನ್ನೇ ಮುಚ್ಚಿ ಬಿಡುವಷ್ಟು ಬಲವಾಗಿರುವ ಅವುಗಳನ್ನು ('ಗಂಭೀರ ತರವಾರಧಿಸ್ಥಗನಚುಂಚವ:') ವಾಯುಸುತ ಹನುಮಂತನು ತಂದೆಸೆದನಲ್ಲವೆ. ಹಾಗಿರುವಾಗ ಪರ್ವತವು ಅವನನ್ನು ತಡೆಯುವ ಪ್ರಮೇಯವೇ ಇಲ್ಲ.

# ೫. ಶ್ರೀ ವಾದಿರಾಜರು ಕಂಡ ಶಿವ

ದೇವತಾ ತಾರತಮ್ಯವು ಮಾಧ್ವಜ್ಞಾನದ ಅತ್ಯಂತ ಮುಖ್ಯ ಲಕ್ಷಣವಾಗಿದೆ. ದೇವತೆಗಳಲ್ಲಿ ಶ್ರೀಹರಿಯೇ ಸರ್ವೋತ್ತಮನು. ಇತರ ದೇವದೇವತೆಗಳು ಅವನಿಗೆ ಆಧೀನರು, ಮತ್ತೆ ಆವರುಗಳಲ್ಲಿ ಪುನ: ತಾರತಮ್ಯ-ಮೊದಲಿಗೆ ಲಕ್ಷ್ಮೀ, ಅನಂತರ ಬ್ರಹ್ಮ, ವಾಯು...

ವಂದೇ ವಿಷ್ಣುಂ ನಮಾಮಿ ಶ್ರೀಯಮಥಚ ಭುವಂ
ಬ್ರಹ್ಮ ವಾಯೂಚ ವಂದೇ ಗಾಯತ್ರೀಂ ಭಾರತೀಂ ತ್ವಾಮ್
ಅಪಿ ಗರುಡಮನಂತಂ ಭಜೇರುದ್ರದೇವಂ
ದೇವೀಂ ವಂದೇ ಸುಪರ್ಣೀಂ......ಇತ್ಯಾದಿ.

ಇಲ್ಲಿ ಶಿವನ ಹೆಸರಿಲ್ಲದಿದ್ದರೂ ರುದ್ರದೇವರಿದ್ದಾರೆ. ಅವರಿಗೆ ಒಂದು ವಿಶೇಷ ಮನ್ನಣೆಯ ಕೆಲಸವಿದೆ, ಭಗವಂತನ ಕೃಪೆಯನ್ನು ಹೊಂದಲು ಒಬ್ಬ ಗುರುವೇ ಆಗಬೇಕು. ಆ ಗುರುವಿನ ಮುಖಾಂತರವೇ ಪರಮಾತ್ಮನನ್ನು ಸೇವಿಸಬೇಕು. ಆ ಸ್ಥಾನವನ್ನು ರುದ್ರದೇವರಿಗೆ ಸಲ್ಲಿಸಲಾಗಿದೆ.

ಆದರೆ ಹರಿ, ಹರ ಎಂಬ ಸ್ಪಷ್ಟ ಭೇದವು ಸಾವಿರಾರು ವರ್ಷಗಳಿಂದ ಭಾರತೀಯರಲ್ಲಿ ನೆಲೆಗೊಂಡಿರುವುದರಿಂದಲೂ ಬೇರೆ ಮತ-ಪಂಥಗಳವರು ಶಿವನನ್ನೇ ಎತ್ತಿ ಹಿಡಿಯುವುದರಿಂದ, ಮಾಧ್ವರು ರುದ್ರದೇವರನ್ನು ವಿಶೇಷವಾಗಿ ನೆನೆಯುವುದಿಲ್ಲ! ಅವರ ಹೆಸರನ್ನು ಅಪರೂಪಕ್ಕೆಂಬಂತೆ ತೆಗೆದುಕೊಳ್ಳುವರು. ಇದು ಲೌಕಿಕದಲ್ಲಿಯೂ ನಿಜ. ಧಾರ್ಮಿಕ ಕೃತಿಗಳಲ್ಲಿಯೂ, ಎಂದರೆ ಹಾಡುಗಳಲ್ಲಿ, ಸ್ತೋತ್ರಗಳಲ್ಲಿ ಶಿವನನ್ನು ಸ್ತುತಿಸುವ ಪ್ರಮೇಯ ಕಡಮೆ. ಅಲ್ಲಲ್ಲಿ ಮಾಡಿರುವರಾದರೂ, ಮುಕ್ತ ಮನದಿಂದ ಬಂದ ಸ್ತುತಿ ಅಲ್ಲವೇನೊ ಎನಿಸುತ್ತದೆ. ಇಂಥ ಸ್ಥಿತಿಗೆ ಇತಿಹಾಸ ಕಾಲದಿಂದಲೂ ಸಾಗಿಬಂದ ವಾದ-ವಿವಾದಗಳು ಕಾರಣವಾದ್ದರಿಂದ ಇಲ್ಲಿ ಅದರ ಬಗ್ಗೆ ಹೆಚ್ಚಿನ ಚರ್ಚೆ ಬೇಡ.

ಆದರೆ ಇಬ್ಬರು ಮಾಧ್ವಯತಿಗಳು ಈ ಸ್ಥಿತಿಗೆ ಅಪವಾದ ಎಂಬಂತಿದ್ದಾರೆ. ಒಬ್ಬರು ಶ್ರೀ ಮಧ್ವಾಚಾರ್ಯರ ಶಿಷ್ಯ ನಾರಾಯಣಪಂಡಿತಾಚಾರ್ಯರು. ಇನ್ನೊಬ್ಬರು ವಾದಿರಾಜರು. ಇವರಷ್ಟು ಭಾವನಿರ್ಭರವಾಗಿ ಶಿವಸ್ತುತಿಯನ್ನು ಮಾಡಿದ ಹರಿಭಕ್ತರು ಬೇರಾರೂ ಇಲ್ಲ. ಶ್ರೀವಾದಿರಾಜರ ಕನ್ನಡ ಕೀರ್ತನೆಗಳಲ್ಲಿ ಮೇಲಿಂದ ಮೇಲೆ ಹರನ ವರ್ಣನೆ ಇದೆ. ಇಡಿಯ ಹಾಡೇ ಅವನನ್ನು ಸ್ತುತಿಸುವ ರೂಪದಲ್ಲಿ ಇದ್ದುದೂ ಉಂಟು. ಇದೊಂದನ್ನು ಗಮನಿಸೋಣ :

ಕೈಲಾಸದಾಶೆಯಲ್ಲಿಹುದೊ
ಶೈಲೇಂದ್ರ ಸುತೆಯರಸ ಶಿವನ ಒಲವಿಲ್ಲದವಗೆ ॥
ಗುರು ಹಿರಿಯರರಿಯದಗೆ ಪರಗತಿಯ ತೊರೆದವಗೆ
ವರಧರ್ಮ ಪಥವ ಮರೆದವಗೆ
ದುರುಳರನೆ ಪೊರೆದು ಪರಸತಿಯ ನೆರೆದವಗೆ

ದೀನಜನರೊಡನಾಡಿ ಹೀನಕರ್ಮವ ಮಾಡಿ
ಆನೆಂಬ ಮಮತೆಯನು ಕೂಡಿ
ದಾನವನೆ ಬೇಡಿ ದುರ್ದಾನಕೆ ಮರುಳಹಗೆ

ಹಯವದನನಲ್ಲೆಂದು ತಾನೆಲ್ಲ ಬಲ್ಲೆಯೆಂದು
ದಯವುಳ್ಳವರ ದೈವವೆನದೆ ಈ
ಸ್ವಯಂಭು ಲಿಂಗದ ಕಲ್ಲೆ ದೈವವೆಂಬುವಗೆ*

ಶಿವನು ಪರಮಾತ್ಮನಾದ ಶ್ರೀಹರಿಯ ದರ್ಶನ ಮಾಡಿಸಬಲ್ಲ ಗುರು- ಎಂಬೀ ಭಾವವನ್ನು ವಾದಿರಾಜರು ಈ ಕೆಳಗಿನ ಹಾಡಿನಲ್ಲಿ ಸೊಗಸಾಗಿ ತಂದಿದ್ದು, ಅನೇಕ ಹೆಣ್ಣುಮಕ್ಕಳು ಇದನ್ನು ಮನೆಯಲ್ಲಿ ಇಂದಿಗೂ ಹಾಡುತ್ತಾರೆ :

ಧವಳಗಂಗೆಯಾ ಗಂಗಾಧರ ಮಹಾಲಿಂಗ ಮಾ-
ಧವನ ತೋರಿಸಯ್ಯ ಗುರುಕುಲೋತ್ತುಂಗ.

---

* ಯಾವುದೋ ವಿಶಿಷ್ಟ ಸಂದರ್ಭದಲ್ಲಿ ಬರೆದ ಮಾತೆಂಬಂತೆ ಇದು ತೋರುತ್ತಿದೆಯಲ್ಲವೆ?

ಮಾರನ ಗೆದ್ದ ಮನೋಹರ ಮೂರ್ತಿ
ಸಾರಸಜ್ಜನರಿಗೆ ಸುರಚಕ್ರವರ್ತಿ
ಧಾರುಣಿಯೊಳಗೆ ತುಂಬಿದೆ ನಿನ್ನ ಕೀರ್ತಿ
ಹರಿಯ ತೋರಿಸಯ್ಯ ನಿನಗೆ ಶರಣಾರ್ಥಿ
ಚೆನ್ನಪ್ರಸನ್ನ ಶ್ರೀ ಹಯವದನನ್ನ
ಅನುದಿನ ನೆನೆವಂತೆ ಮಾಡೊ ನೀ ಎನ್ನ
ಅನ್ಯರರಿಯೆನೊ ಗುರುವೆಂಬೆ ನಿನ್ನ
ಇನ್ನಾದರು ಹರಿಯ ತೋರೊ ಮುಕ್ಕಣ್ಣ

## ಶೈವ ಕ್ಷೇತ್ರಗಳು

ತೀರ್ಥಪ್ರಬಂಧದಲ್ಲಿ ಹತ್ತಾರು ಶೈವ ಕ್ಷೇತ್ರಗಳ ವರ್ಣನೆ ಇದೆ. ಆ ಕ್ಷೇತ್ರಗಳೆಂದರೆ, ದಕ್ಷಿಣ ಕನ್ನಡ ಜಿಲ್ಲೆಯ ಯೆಲ್ಲೂರು, ಕೋಟೇಶ್ವರ, ಕ್ರೋಡ (ಕೊಡಗಿ) ಉತ್ತರ ಕನ್ನಡ ಜಿಲ್ಲೆಯಲ್ಲಿ ಬನವಾಸಿ, ಏಣ, ಗೋಕರ್ಣ, ಧಾರವಾಡ ಜಿಲ್ಲೆಯ ಬಿದರಹಳ್ಳಿ; ಅದರಂತೆ ದಕ್ಷಿಣದಲ್ಲಿಯ ಹರಿಹರ, ಹಂಪಿ, ಶ್ರೀಶೈಲ, ಕಾಂಚಿ, ಅರುಣಾಚಲ ಮತ್ತು ರಾಮೇಶ್ವರಗಳು. ಉತ್ತರದ ಕಾಶಿಯಂತೂ ಸರಿಯೇ.

ಶ್ರೀ ವಾದಿರಾಜರು ಕಂಡ ಶಿವನು ಲಯಕಾರಿಯಲ್ಲ; ಅತ್ಯಂತ ಮಂಗಳಕರನಾಗಿ ಅವರಿಗೆ ತೋರಿ ಬಂದಿದ್ದಾನೆ. ಅವನ ರೂಪ–ಗುಣಗಳನ್ನು ಅವರು ವಿವರಿಸಿದ ರೀತಿಯಲ್ಲಿ ಈ ಅಂಶ ಎದ್ದು ಕಾಣುವಂತಿದೆ.

ಉದಾಹರಣೆಗೆ ಅವರು ಸ್ತುತಿಸಿದ ಯೆಲ್ಲೂರಿನ ವಿಶ್ವನಾಥನನ್ನು ನೋಡೋಣ. ಅವನನ್ನು ಒಂದಲ್ಲ, ಐದು ಶ್ಲೋಕಗಳಲ್ಲಿ ಬಣ್ಣಿಸಿದ್ದಾರೆ (ಪ. ಪ್ರ. ೨೨–೨೫). ಈ ವಿಶ್ವನಾಥನ ಶರೀರವು ಅಚ್ಚ ಬಿಳಿಯದು. ಮೈಗೆ ಹಾವುಗಳು ಅಂಟಿಕೊಂಡಿರುವುದರಿಂದ ಮೈ ಕೈ ತುಂಬಿಕೊಂಡವನಾಗಿ ಎತ್ತರವಾಗಿದ್ದಾನೆ; ಈ ಬಾಲಚಂದ್ರನ ತನಿ ಬೆಳಕಿನಿಂದಲೂ, ಗಂಗಾತರಂಗದಿಂದಲೂ ಅವರ ಶಿರವು ಮಂಗಲಮಯವಾಗಿದೆ. ಆ ಕಂಠ ಕಾಂತಿಯು ಭ್ರಮರದಂತೆ ಕಪ್ಪು

ಹೊಳಪಿಸದು. ಕೊರಳಲ್ಲಿ ಜಪಮಾಲೆ; ಕೈಯಲ್ಲಿ ಮಹಾ ತ್ರಿಶೂಲ. ಅವನ ಪಾದ ಪದ್ಮಗಳನ್ನು ಇಂದ್ರಾದಿ ದೇವಗಣದವರು ವಂದಿಸುತ್ತಿದ್ದಾರೆ. ಇತ್ತ ಅವನು ಅಲಂಕಾರಪ್ರಿಯ. ಅವನಿಗೆ ಕುಂದಪ್ರಸೂನ ಎಂದರೆ ಕೋಲು ಮಲ್ಲಿಗೆಯ ಹೂಗಳೆಂದರೆ ತುಂಬಾ ಇಷ್ಟ. ಆ ಹೂಗಳ ಪೂಜೆಯನ್ನು ಕೈಕೊಂಡದ್ದರಿಂದ ಪ್ರಸನ್ನನಾಗಿದ್ದಾನೆ (ತೃಪ್ತಚಿತ್ತ). ಮೇಲಾಗಿ ಪಾರ್ವತಿಯು ಪ್ರೀತಿಯಿಂದ ತನ್ನ ಕಡೆಗಣ್ಣ ನೋಟವನ್ನು ಚೆಲ್ಲಿದ್ದಾಳೆ.* ಅದರಂತೆ ನಾರದ, ಸನಂದ ಮೊದಲಾದವರು ಬಳಿಯಲ್ಲಿದ್ದುಕೊಂಡು ಸ್ತುತಿಗೈಯುತ್ತಿದ್ದಾರೆ. ಅವರು ಯೋಗಿಗಳು, ವಿರಕ್ತರು. ಆದರೇನಂತೆ, ಸಂಗೀತ ಲೋಲುಪರು.* ಇತ್ತ ಅವನ ಗುಣಸಾಮರ್ಥ್ಯವನ್ನು ವರ್ಣಿಸುತ್ತ, ಅವನು ಪೂರ್ಣಜ್ಞಾನವುಳ್ಳವ, 'ಸುಹೃದ್ಧನ' ಮತ್ತು ದೀನಬಂಧು ಎಂದೆಲ್ಲ ವಿಶ್ಲೇಷಿಸಿ ವಾದಿರಾಜರು ಪ್ರತಿ ಶ್ಲೋಕದ ಕೊನೆಯಲ್ಲಿ 'ತಮಾಶ್ರಯ ವಿಶ್ವನಾಥಂ' ಎಂದು ನಮಗೆ ಬೋಧಿಸಿದ್ದಾರೆ. ಇದೆಲ್ಲ ವರ್ಣನೆಯನ್ನು ಗಮನಿಸಿದಾಗ ವಾದಿರಾಜರು ಶಿವಸನ್ನಿಧಿಯನ್ನು ತಮ್ಮ ಮನಶ್ಚಕ್ಷುವಿನ ಮುಂದೆ ನಿಚ್ಚಳವಾಗಿ ನಿಲ್ಲಿಸಿಕೊಂಡೇ ವರ್ಣನೆಗೆ ತೊಡಗಿದ್ದಾರೆಂದು ಭಾಸವಾಗುವುದು. ಆ ಶ್ಲೋಕಗಳ ಪದಬಂಧವಲ್ಲಿ ಅದೆಂತಹ ಲಾಲಿತ್ಯ ! ಒಂದನ್ನು ಇಲ್ಲಿ ಕೊಟ್ಟಿದೆ :

ಇಂದ್ರಾದಿದೇವ ಗಣವಂದಿತ ಪಾದಪದ್ಮಂ
ಚಂದ್ರಾರ್ಧಚೂಡಮರವಿಂದದಲಾಯತಾಕ್ಷಂ
ಕಂಡರ್ಪವೈರಿಣಮಸಿಂದ್ಯ ಮಮಂದ ಬೋಧಂ
ತಂ ದೇವದೇವಮಿಮಮಾಶ್ರಯ ವಿಶ್ವನಾಥಮ್, (ಪ. ಪ್ರ. ೨೩)

ಮುಂದೆ ಇತರ ಶೈವ ಕ್ಷೇತ್ರಗಳನ್ನು ವರ್ಣಿಸುವಾಗಲೂ ಇದೇ ತಾದಾತ್ಮ್ಯ ಕಂಡು ಬರುತ್ತದೆ. ಕಲ್ಪನೆ ಚೆಲ್ಲುವರಿದಿದೆ.

---

* ಮುಂದೆ ಬಿದರಹಳ್ಳಿಯ ಸೋಮೇಶ್ವರನನ್ನು ಸ್ತುತಿಸುವಾಗ (ಪ. ಪ್ರ. ೬೮) ಈ ಭಾವವು ಮತ್ತೆ ವ್ಯಕ್ತಗೊಂಡಿದೆ : 'ಪ್ರೇಮ ಪ್ರಬುದ್ಧ ಗಿರಿಜಾ ಹೃದಿಭಾಸ್ಕರಾಯ'.

* ಸ್ವತಃ ಶಿವನು 'ಗಾಯಕದೂಷಣರ' — ಎಂಬುದಾಗಿ ಬನವಾಸಿಯ ಮಧುಕೇಶ್ವರನನ್ನು ಬಣ್ಣಿಸುವಾಗ ಹೇಳಿದ್ದಾರೆ.

ವಿಶ್ವನಾಥನು ಕಾಶಿಯ ಗಂಗಾ ತೀರದವ. ಆದರೆ ನಮ್ಮಲ್ಲಿ ಎಂದರೆ ನೇತ್ರಾವತಿ ಹಾಗೂ ಕುಮಾರಧಾರಾ ನದಿಗಳು ಸೇರುವ ತೀರದಲ್ಲಿ ಕಾಯಂ ಉಳಿದುಕೊಂಡಿದ್ದಾನೆ. ಅದೂ ಸಹಸ್ರರೂಪನಾಗಿ! ಈ ಸಂಖ್ಯೆ ಉತ್ಪ್ರೇಕ್ಷೆಯ ದೇನಲ್ಲ. ಆ ಸಂಗಮದಲ್ಲಿ ಸಾವಿರ ಲಿಂಗಗಳುಳ್ಳ ಶಿವದೇವಾಲಯುವೇ ಇದೆ. ಹೀಗೆ ಗಂಗಾತೀರವನ್ನು ಬಿಟ್ಟು. ಸಹಸ್ರ ರೂಪದಲ್ಲಿ ಶಿವನು ನೆಲೆ ನಿಲ್ಲಬೇಕಾದರೆ ಈ ಶಿವದೇವಾಲಯವು ಪವಿತ್ರವಾದುದೆಂಬುದು ವಾದಿರಾಜರ ಇಂಗಿತವಾಗಿದೆ.

ಕೋಟೇಶ್ವರ ಶಿವದೇವಾಲಯ ವಿಚಾರದಲ್ಲಿ ಬೇರೊಂದು ಕಲ್ಪನೆ ಹೊರ ಹೊಮ್ಮಿದೆ. ಅದಕ್ಕೆ 'ಕೋಟಿ' ಎಂಬ ವಿಶೇಷಣ ಪದವು ಬಂದದ್ದರ ಕಾರಣವೆಂದರೆ, ಇಲ್ಲಿಯ ಈಶ್ವರನು ಕೋಟಿಗಟ್ಟಲೆ ಭಕ್ತರನ್ನು ಉದ್ಧರಿಸಬಲ್ಲವನೆಂದು. ಮತ್ತೆ ಇವನು 'ತ್ರಿಪುರ' ವಿಜೇತ. ಈ ತ್ರಿಪುರ ಪದಕ್ಕೆ ಎರಡು ಅರ್ಥಗಳು. ಒಂದು, ತ್ರಿಪುರ ರಾಕ್ಷಸ. ಪುರಾಣ ಯುಗದಲ್ಲಿ ಅವನನ್ನು ಶಿವನು ಗೆದ್ದವ. ಇನ್ನೊಂದು ಅರ್ಥ–ಮೂರು ಊರುಗಳೆಂದು. ಶ್ರೀ ವಾದಿರಾಜರ ಕಾಲದಲ್ಲಿ ಕೋಟೇಶ್ವರದ ಬಳಿಯಲ್ಲಿರುವ ಕಂದಾವರ, ಕುಂಭಾಸಿ ಮತ್ತು ಬ್ರಹ್ಮಾವರ– ಈ ಮೂರು ಗ್ರಾಮಗಳಿಂದ ವಂತಿಗೆಯನ್ನು ಎತ್ತಿ ಈ ದೇವಸ್ಥಾನಕ್ಕಾಗಿ ವಿನಿಯೋಗಿಸುತ್ತಿದ್ದರು. ಆ ಅರ್ಥದಲ್ಲಿ ಕೋಟೇಶ್ವರನು ತ್ರಿಪುರ ವಿಜೇತನು.

ಉತ್ತರ ಕನ್ನಡ ಜಿಲ್ಲೆಯ ಏಣದಲ್ಲಿ ಭೈರವೇಶ್ವರನ ದೇವಾಲಯವಿದೆ. ಅವನ ದರ್ಶನ ಒಂದು ಸಾಹಸವೇ ಸೈ, ಬೆಟ್ಟ ಹತ್ತಿ ಹೋಗಬೇಕು. ಗುಹೆಯೊಳಗಿರುವ ಅವನ ದರ್ಶನವನ್ನು ಶಿವರಾತ್ರಿಯ ದಿನಗಳಲ್ಲಷ್ಟೆ ಪಡೆಯಬೇಕಾಗುವುದು. ಶ್ರೀ ವಾದಿರಾಜರು ಭಕ್ತಿಭಾವದಿಂದ ಪ್ರೇರಿತರಾಗಿ ಒಂದೊಮ್ಮೆ ಹೋಗಿ ಬಂದಿರಬೇಕು; ಪುರಾಣವೊಂದರ ಪ್ರಕಾರ, ಈ ಭೈರವನು ಭಸ್ಮಾಸುರನಿಗೆ ಹೆದರಿ ಏಣದಂತೆ (ಜಿಂಕೆ) ಓಡಿಹೋಗಿ ಆ ಗುಹೆಯಲ್ಲಿ ಅಡಗಿಕೊಂಡನಂತೆ. ಶ್ರೀವಾದಿರಾಜರಿಗೆ ಇದು ಸರ್ವಥಾ ಸಮ್ಮತವಿಲ್ಲ, ಏಣದಂತೆ ಓಡಿಹೋದದ್ದು ಭಕ್ತ ಜನರ ಪಾಪ ರಾಶಿ. ಭೈರವನಿಗೆ ಹೆದರಿ ಅದೇ ದಿಕ್ಕು ಪಾಲಾಗಿ ಓಡಿಹೋದದ್ದು–ಎನ್ನುತ್ತಾರೆ.

ಗೋಕರ್ಣದ ಶಿವಲಿಂಗವನ್ನು ಇಲ್ಲಿಯೇ ಪ್ರಸ್ತಾಪಿಸಬೇಕು. ಯಾವುದೊಂದು ಅಂಕಿತ ನಾಮ (ದೇವತೆಗಳದ್ದು, ಊರಿನದ್ದು) ಗಮನಕ್ಕೆ ಬಂದರಾಯಿತು, ಅದಕ್ಕೆ ವಿಶಿಷ್ಟ ಅರ್ಥ ಹಚ್ಚುವುದು ವಾದಿರಾಜರ ವೈಶಿಷ್ಟವಾಗಿದೆ. 'ಗೋಕರ್ಣ' ಗೋವಿನ ಕಿವಿ ಎಂಬುದು ಅದರ ಸಾಮಾನ್ಯಾರ್ಥ. 'ಗೊ' ಶಬ್ದಕ್ಕೆ ಕಣ್ಣು ಎಂಬ ಅರ್ಥವೂ ಇದೆ. (ಕಣ್ಣೇ ಕಿವಿಯಾಗಿರುವಂತಹದು). ಶಿವನು ಸರ್ಪಗಳಿಂದ ಭೂಷಿತನಾದವನು ತಾನೇ. ಹಾಗೆ ಅವು ಅವನ ಮೇಲೆ ಉಪಕಾರ ಮಾಡಿದಂತಾಯಿತು. ಅದರಿಂದ ಪ್ರೀತನಾದ ಶಿವನು ಅವುಗಳ ಉಪಕಾರವನ್ನು ತೀರಿಸುತ್ತಿದ್ದಾನೆಯೊ ಎಂಬಂತೆ, ಅವುಗಳ ಹೆಸರನ್ನು ಪಡೆದ 'ಗೋಕರ್ಣ' ಕ್ಷೇತ್ರದಲ್ಲಿ ವಾಸಿಸುತ್ತಿದ್ದಾನೆ— ಎಂದು ಹೇಳಿದ್ದಾರೆ (ಪ.ಪ್ರ.೮೧)

## ಶ್ರೀಶೈಲ

ಶ್ರೀಶೈಲದ ಜ್ಯೋತಿರ್ಲಿಂಗದ ವರ್ಣನೆ ಮಾತ್ರ ಅತ್ಯಂತ ಸಹಜ ಸುಂದರವಾಗಿದೆ. ಅಲ್ಲಿಯ ಮಲ್ಲಿಕಾರ್ಜುನ ಮಂದಿರದ ಸುತ್ತಲೂ ದಟ್ಟವಾದ-ಕಪ್ಪಾದ ಕಾಡು ಪಸರಿಸಿದೆಯಷ್ಟೆ, ಮಲ್ಲಿಕಾರ್ಜುನನೋ (=ಮಲ್ಲಿಗೆಯಂತೆ) ಬೆಳ್ಳಗಿರುವವ. ಆ ಮಂದಿರವು ಕಾಡಿನಲ್ಲಿದ್ದರೂ, ಶಿವ ಸಾನ್ನಿಧ್ಯದಿಂದಾಗಿ ಪ್ರಕಾಶಮಾನವಾಗಿದೆ. ಅದಕ್ಕೆ ವಾದಿರಾಜರು 'ಏಕದೇಶ'ವಾದ ಉಪಮೆಯನ್ನು ಹೇಳಿದ್ದಾರೆ. ಅದೇನೆಂದರೆ, ಶಿವನ ಎತ್ತಿ ಕಟ್ಟಿದ ಕಪ್ಪಾದ ಜಡೆಯಲ್ಲಿ ಇರುವ ಚಂದ್ರನೋಪಾದಿಯಲ್ಲಿ ಶ್ರೀಶೈಲದ ಕಾಡಿನಲ್ಲಿ ಶಿವನು ಹೊಳೆಯುತ್ತಿದ್ದಾನೆ ಎಂದು.

ಶ್ರೀಶೈಲ ಶಿಖರಾವಾಸೋ ಭಾತೀಶೋ ಮಲ್ಲಿಕಾರ್ಜುನಃ
ಬದ್ಧಸ್ತ್ರೀಯ ಜಟಾಜೂಟ ಮಧ್ಯಸ್ಥ ಇವ ಚಂದ್ರಮಾಃ ॥
(ಪೂ.ಪ್ರ.೩)

## ಕಾಂಚಿ

ತಮಿಳುನಾಡಿನ ಕಾಂಚಿಯಲ್ಲಿ ಏಕಾಮ್ರೇಶ್ವರನ ಗುಡಿಯು ಸುಪ್ರಸಿದ್ಧವಾದುದು. ಅದರ ಬಳಿಯಲ್ಲಿ ದೊಡ್ಡ ಮಾವಿನ ಮರ. ಒಳಗೆ ಶಿವಲಿಂಗವನ್ನು ಅಪ್ಪಿರುವ ಪಾರ್ವತಿಯ ಮೂರ್ತಿ. ಇವನ್ನು ಆಧರಿಸಿ ಪೌರಾಣಿಕ ಕತೆ

ಯೊಂದು ಸೃಷ್ಟಿಯಾಯಿತು : ಪಾರ್ವತಿಯು ಆ ಅಮ್ರ ವೃಕ್ಷದಡಿಯಲ್ಲಿ ಕುಳಿತು ತಪಸ್ಸು ಮಾಡಿದಳು, ಅದರಿಂದ ಪ್ರೀತನಾದ ಶಿವನು ಅವಳನ್ನು ಸ್ವೀಕರಿಸಿದನು. ಆದರೆ ಕಾಮನ ಚೂತಬಾಣದಿಂದ ಶಿವನು ನೋವನ್ನು ಅನುಭವಿಸಿದನಲ್ಲವೆ. ಆ ನೋವನ್ನು ಹೋಗಲಾಡಿಸಲೆಂದು ಪಾರ್ವತಿಯು ಅಪ್ಪಿಕೊಂಡಿದ್ದಾಳೆ–ಎಂಬುದಾಗಿ ವಾದಿರಾಜರು ಊಹಿಸುತ್ತಾರೆ.

ಶ್ರೀ ವಾದಿರಾಜರ ಪ್ರಕಾರ ಶಿವನ ಮೂರನೆಯ ಕಣ್ಣು ಕಾಮನನ್ನು ದಹಿಸಲಿಕ್ಕೆ ಅಲ್ಲ. ಅನುಪಮ ಸುಂದರಿಯಾದ ಪಾರ್ವತಿಯನ್ನು ನೋಡಲು ಎರಡು ಕಣ್ಣುಗಳು ಸಾಲದೆನಿಸಿ, ಅವನು ತ್ರಿನೇತ್ರನಾದದ್ದು ! ಭೂಲೋಕದಲ್ಲಿರುವ ಈ ರೂಪಸಂಪನ್ನ ಪಾರ್ವತಿ ಇನ್ನಾರೂ ಅಲ್ಲ, ಏಕಾಮ್ರೇಶ್ವರನ ಗುಡಿಗೆ ಹೊಂದಿ ಇರುವ ಕಾಂಚಿಯ ಕಾಮಾಕ್ಷಿ. ಅವಳ ವಿಗ್ರಹ ಅತ್ಯಂತ ಸುಂದರವಾದದ್ದೆಂಬುದನ್ನು ನೋಡಿದವರೆಲ್ಲ ಬಲ್ಲರು. ಆಕೆ ಚಿರ ಯೌವನೆಯೂ ಆಗಿದ್ದಾಳೆಂಬ ಅಂಶದ ಬಗ್ಗೆ ವಾದಿರಾಜರ ಕಲ್ಪನೆ ತನ್ನದೇ ಆದ ರೀತಿಯಲ್ಲಿ ಗರಿಗೆದರಿತು. ಆಕೆಯನ್ನುದ್ದೇಶಿಸಿ ಹೇಳುತ್ತಿದ್ದಾರೆ.

'ನಿನ್ನ ಪತಿ ಹೆಸರಿಗೆ ಮಾತ್ರ ಕಾಮಧ್ವಂಸಿಯೆಂದು ಕಾಣ್ತದೆ. ನಿನ್ನನ್ನು ಕೂಡಿಕೊಂಡು ಎರಡು ಮಕ್ಕಳನ್ನು ಪಡೆದ! ಮಕ್ಕಳಾದ ಮೇಲೆ ಸ್ತ್ರೀ ಸೌಂದರ್ಯಕ್ಕೆ ಕಿಂಚಿತ್ (ವಿಘ್ನ) ಅಡತಡೆಯಾಗುವುದು ಸಹಜವೇ. ಆದರೆ ನಿನ್ನಲ್ಲಿ ಅಪಾರ ಮೋಹವುಳ್ಳವನಾದ ಶಿವನು ಆ ವಿಘ್ನ ಬರಬಾರದೆಂದು, ಮಗ ಗಣೇಶನನ್ನು ವಿಘ್ನಹರನನ್ನಾಗಿ ಮಾಡಿದ. ಇನ್ನೊಬ್ಬ ಮಗ ಷಣ್ಮುಖ! (ಆರು ಮೊಗಗಳು) ಆ ಲೆಕ್ಕದಲ್ಲಿ ಹಾಲು ಕುಡಿದದ್ದೇ ಆದರೆ......! ಹೀಗೆಂದು ಯೋಚಿಸಿ ಅವನಿಗೆ ಮೊಲೆಯೂಡಿಸಲು ಆ ಕೃತಿಕಾ ದೇವತೆಗಳನ್ನು ಗೊತ್ತುಪಡಿಸಿದ (wet nurses) ಅಮ್ಮಾ, ಶಿವನಿಗೆ ನೀನು ಇಷ್ಟೊಂದು ಪ್ರೀತ್ಯಾಸ್ಪದಳಾಗಿರುವ ಎಂದು ವರ್ಣಿಸಿ. 'ತವ ಚರಣಂ ಸದಾ ಶರಣಂ ಪ್ರಪದ್ಯೆ' ಎಂದು ಪ್ರಾರ್ಥಿಸಿದ್ದಾರೆ.

ಹೀಗೆಯೇ ಅರುಣಾಚಲ, ವೃದ್ಧಾಚಲ, ರಾಮೇಶ್ವರ ಮುಂತಾದ ಇನ್ನೂ ಹಲವು ಶಿವ ಕ್ಷೇತ್ರಗಳನ್ನೂ ಸಂದರ್ಶಿಸಿ ಶಿವನನ್ನು ಸೊಗಸಾಗಿ ವರ್ಣಿಸಿದ್ದಾರೆ.

ಅವನನ್ನು ಇಷ್ಟೊಂದು ಮುಕ್ತ ಮನದಿಂದ ಹಾಡಿ ಹೊಗಳಿದರೂ, ದೇವತಾ ತಾರತಮ್ಯದಲ್ಲಿ ಅವನಿಗಿಂತ ಶ್ರೀ ಹರಿಯೇ ಉಚ್ಚ ಸ್ಥಾನದಲ್ಲಿದ್ದಾನೆಂಬುದನ್ನು ವಾದಿರಾಜರು ಒಂದು ಕ್ಷಣ ಮಾತ್ರವೂ ಮರೆತಿಲ್ಲ. ಅಲ್ಲದೆ, ಆಗತ್ಯ ಕಂಡಲ್ಲೆಲ್ಲ ಅದನ್ನು ನಮಗೆ ಮನವರಿಕೆ ಮಾಡಿಕೊಡುತ್ತಾರೆ.

## ಹರಿ ಹರ ಭೇದ

ಕೆಲವೊಂದು ಕ್ಷೇತ್ರದಲ್ಲಿ ಹರಿ, ಹರ ಇಬ್ಬರೂ ಪೂಜೆಗೊಳ್ಳುತ್ತಾರೆ. ಉದಾ:ಗೆ ಕ್ರೋಡ ಮತ್ತು ಹರಿಹರ. ಅದ್ವೈತ ಪ್ರಣಾಲಿಯ ಪ್ರಕಾರ, ಅವರಿಬ್ಬರೂ ಒಂದೇ ಎಂಬ ಭಾವನೆ ಅನೇಕರಿಗಿರುತ್ತದೆ. ಆದರೆ ಅವರು ಬೇರೆ ಬೇರೆಯೇ; ಮತ್ತು ಅವರಲ್ಲಿ ಶ್ರೀಹರಿಯು ಪರಮ ಶ್ರೇಷ್ಠನು ಎಂಬುದನ್ನು ಚತುರತೆಯಿಂದ ಮನಗಾಣಿಸಿಕೊಟ್ಟಿದ್ದಾರೆ :

ಕ್ರೋಡದ ಶಂಕರನಾರಾಯಣ ಮಂದಿರದಲ್ಲಿ ಎರಡು ಲಿಂಗಗಳಿವೆ. ಎಂದರೆ ನಾರಾಯಣನೂ ಲಿಂಗರೂಪದಲ್ಲಿಯೇ ಇದ್ದಾನೆ. ನಾರಾಯಣ ನಾಮಕ ಲಿಂಗವು ದಪ್ಪನಾಗಿದೆ. ಇನ್ನೊಂದು ಶಿವಲಿಂಗ; ಕೃಶವಾಗಿದೆ. ಈ ವ್ಯತ್ಯಾಸ ಏನನ್ನು ತೋರಿಸುತ್ತದೆ ? ಹಾಗೆ ನೋಡಿದರೆ ಶಿವಲಿಂಗಕ್ಕೇನೆ ನೈವೇದ್ಯ ಅರ್ಪಿಸುವುದು ಹೆಚ್ಚು. ಈ ಲಿಂಗದ್ವಯದ ಗಾತ್ರವು ಮತ್ತು ಭಕ್ತರ ಪೂಜಾ ಪರಿಪಾಠ ಭಿನ್ನವಾಗಿರುವುದರಿಂದ ಶಂಕರ ಮತ್ತು ನಾರಾಯಣರು ಬೇರೆ ಬೇರೆ ಎಂದೇ ತಿಳಿಯಬೇಕು. ಇಲ್ಲಿಯ ನಾರಾಯಣನೂ ಲಿಂಗರೂಪಿ ಇದ್ದ ಮಾತ್ರಕ್ಕೆ ಅವರಲ್ಲಿ ಅಭೇದವಿದೆಯೆಂದು ತಿಳಿಯಬಾರದು. ಶ್ರೀ ವಾದಿರಾಜರು ಈ ಕುರಿತು ಯುಕ್ತಿ ವಾದವನ್ನು ಮಂಡಿಸಿದ್ದಾರೆ : ಇಬ್ಬರೂ ಒಂದೇ ಆಗಿದ್ದಾದರೆ

* ಈ ಕ್ರೋಡ ಶಂಕರನಾರಾಯಣನ ಸ್ತುತಿಯು 'ಹೂಂಕಾರದಲ್ಲಿ ನಿತ್ಯ ಭೂತಗಳನಟ್ಟಿ?' ಎಂಬ ಹಾಡಿನಲ್ಲಿಯೂ ಬಂದಿದೆ. ಇಲ್ಲಿ ಕ್ರೋಡ ಗ್ರಾಮವನ್ನು ಕೊಡಗಿ ಎಂದು ಕರೆದುದೊಂದು ವಿಶೇಷ. ಇವರಲ್ಲಿ ಅವರಿಬ್ಬರಿಗೂ ಅನ್ವಯಿಸುವ ವಿಶೇಷಣಗಳನ್ನು ಜೊತೆಯಾಗಿ, ಆದರೆ ಪ್ರತ್ಯೇಕ ಅರ್ಥ ಬರುವಂತೆ ಕೊಟ್ಟಿದ್ದಾರೆ : ಉದಾ.ಗೆ ಕಂದರ್ಪವೈರಿ ಮತ್ತು ಕಂದರ್ಪಪಿತ; ನಂದಿವಾಹನ–ಗರುಡವಾಹನ, ಕರ್ಪೂರಗೌರ–ಮೇಘಶ್ಯಾಮಲ, ಇತ್ಯಾದಿ.

ಅವರಿಗೆ ಒಬ್ಬಳೇ ಹೆಂಡತಿ ಇರಬೇಕಲ್ಲವೆ. ಆದರೆ ಒಬ್ಬ ಉಮೇಶ; ಇನ್ನೊಬ್ಬ ರಮೇಶ.*

ಹರಿಹರ ಕ್ಷೇತ್ರದಲ್ಲಿಯಾದರೂ ಒಂದೇ ಪ್ರತಿಮೆಯಲ್ಲಿ ಹರ ಮತ್ತು ಹರಿ ಇದ್ದಾರೆ. ಅದು ಕಾರಣ, ಅವರಿಬ್ಬರೂ ನಿಶ್ಚಯವಾಗಿ ಒಂದೇ ಎನ್ನಬಹುದೆ? ಸರ್ವಥಾ ಕೂಡದು. ವಾದಕ್ಕೆಂದು ಹೇಳುವುದಾದರೆ, ಶಿವನು ಅರ್ಧನಾರಿ, ಅರ್ಧಪುರುಷ–ಒಂದೇ ದೇಹದಲ್ಲಿ. ಹಾಗಿದ್ದ ಮಾತ್ರಕ್ಕೆ ಸ್ತ್ರೀ, ಪುರುಷರಲ್ಲಿ ಭೇದವೇ ಇಲ್ಲ ಎನ್ನಲಾದೀತೆ ? ('ಅರ್ಧನಾರೀಶ್ವರಶ್ಶಂಭು: ಯಥಾ ಭೇದೇಪಿ ದೃಶ್ಯತೇ') ಮುಂದುವರಿದು ವಾದಿರಾಜರು ಭಿನ್ನ–ವಿರುದ್ಧ ಪ್ರಕ್ರಿಯೆಯ ಎರಡು ಅಂಶಗಳು ಒಂದರಲ್ಲೇ ಇರುವುದಕ್ಕೆ ಗಿಡ ಮೂಲಿಕೆಯೊಂದರ ಉದಾಹರಣೆಯನ್ನು ಕೊಟ್ಟು, ಆ ಬಳ್ಳಿಯ ಕೆಳಭಾಗದಲ್ಲಿ ವಿಷ ಇರುವುದು; ಮೇಲ್ಭಾಗವು ನಿರ್ವಿಷವಾದದ್ದು– ಎಂದಿದ್ದಾರೆ.

# ೬. ತೀರ್ಥ ಪ್ರಬಂಧದ ಪದ್ಯಬಂಧ

ತೀರ್ಥ ಪ್ರಬಂಧ ಕಾವ್ಯದ ಇನ್ನೊಂದು ವೈಶಿಷ್ಟ್ಯವೆಂದರೆ ಪದಲಾಲಿತ್ಯ. ಪ್ರತಿ ಶ್ಲೋಕದಲ್ಲಿ ಪ್ರಾಸ, ಅನುಪ್ರಾಸ, ವೃತ್ಯನುಪ್ರಾಸ- ಪ್ರಾಸದ ಏನೆಲ್ಲ ಪ್ರಕಾರಗಳಿವೆಯೊ ಅವನ್ನೆಲ್ಲ ಲೀಲಾಜಾಲವಾಗಿ ಬಳಸಿದ್ದಾರೆ. ಅದಕ್ಕೆ ಅನುಸಾರಿಯಾಗಿಯೆ ಅಲ್ಲಲ್ಲಿ ಬಂದಿರುವ ಅನುಸ್ವಾರದ ಪುನರಾವರ್ತನೆಯಿಂದಾಗಿ ಶ್ಲೋಕಗಳನ್ನು ಅನ್ನುವಾಗ ಶಬ್ದಗಳು ಕುಣಿಯುವಂತೆ ಭಾಸವಾಗುತ್ತದೆ. ಇದೊಂದು ಮಾದರಿ :

ಸಂಸಾರ ಸಂಸರಣ ಖೇದ ವಿಭೇದಕಾರಿ
ಕಂಸಾರಿ ಸಂಶ್ರಿತ ತಟೀಗತ ಚಾರುವಾರಿ
ವಿಶ್ರಾಂತಿ ತೀರ್ಥಮಲಂ ಹರಿಲೋಕವಾಸ
ವಿಶ್ರಾಂತಿ ದಂ ದಿಶತು ನಸ್ಸಕಲೇಪ್ಸಿತಾನಿ, (ಉ. ಪ್ರ. ೩೨)

ಕನ್ನಡ ಹಾಡಿನ ಒಂದು ಮಾದರಿಯನ್ನು ನೋಡೋಣ. ಸಂದರ್ಭ: ಸ್ತ್ರೀ ವೇಷದ ಭೀಮಸೇನನನ್ನು ಕೀಚಕನು ಅಪ್ಪಿಕೊಳ್ಳ ಹೊರಟದ್ದು :

ಚಲ್ವೆ ಕೇಳು ನಿನ್ನ ಹಲ್ಲೆಗಣ್ಣ ನೋಟ
ಕೊಲ್ವ ಬಗೆಗೆ ನಾ ಗೆಲ್ಲಲಾರೆ ಎಂದು
ಗಲ್ಲ ಮುದ್ದಿಟ್ಟು ಮೈಯೆಲ್ಲ ಹುಡುಕಲು
ಕಲ್ಲೆದೆ ಅಲ್ಲಿರೆ ಖುಲ್ಲ ನೊಂದ

ಈ ಬಗೆಯಾಗಿ ವೃತ್ಯನುಪ್ರಾಸಕ್ಕೆ ತೀರ್ಥಪ್ರಬಂಧದಲ್ಲಿ ಬೇಕಾದಷ್ಟು ಉದಾಹರಣೆಗಳಿವೆ. ಇದೊಂದು ಮಾದರಿ :

ಗದಾಧರ ಸದಾಧರ ಸ್ಫುರಿತ ಚಾರುಹಾಸೋಲ್ಲಸತ್
ಸುಧಾಧರ ಮುದಾಧರಾಮರಕೃತ ಸ್ತುತೇ ಸುಂದರ
ಪದಾಧರ ಮದಾಧರ ಸ್ಖಲಿತ ವಿಲಾಶ ಮಾಂ ಸದ್ವರ—
ಪ್ರದಾಧರಚಿದಾಧರ ಪ್ರಮುದಿತಾಂತರ ಶ್ರೀಧರ (ಉ. ಪ್ರ. ೨೮)

ಕನ್ನಡ ಕವಿತೆಯ ಲಕ್ಷಣವಾದ ದ್ವಿತೀಯ ಪ್ರಾಸವನ್ನು ಈ ಸಂಸ್ಕೃತ ಶ್ಲೋಕದಲ್ಲಿ ತಂದದ್ದು ಗಣನೀಯವಾದುದು.

ಈ ದ್ವಿತೀಯ ಪ್ರಾಸವನ್ನು ವಾದಿರಾಜರು ಯಥೇಚ್ಛವಾಗಿ (ಸುಮಾರು ೪೦ ರಷ್ಟು ಶ್ಲೋಕಗಳಲ್ಲಿ) ತಂದಿದ್ದಾರೆ.

ಶ್ರೀ ವಾದಿರಾಜರು ಬಳಸಿದ ಛಂದೋವೃತ್ತಗಳ ಬಗ್ಗೆಯೂ ಒಂದೆರಡು ವೃತ್ತವನ್ನಾಯ್ದುಕೊಂಡು ವಾದಿರಾಜರು ಅದರಲ್ಲಿ ಬಹಳವಾದರೆ ಎರಡು ಶ್ಲೋಕಗಳನ್ನು ರಚಿಸಿಯಾದ ಮೇಲೆ, ಕೂಡಲೇ ಬೇರೊಂದು ವೃತ್ತವನ್ನು ಎತ್ತಿಕೊಂಡಿದ್ದಾರೆ! ಅದರಿಂದ ಪದ್ಯಬಂಧ ತುಂಬಾ ವೈವಿಧ್ಯಮಯವಾಗಿದೆ. ಅವರು ಬಳಸಿದ ವೃತ್ತಗಳಲ್ಲಿ ಇಂದ್ರವಜ್ರ, ವಸಂತತಿಲಕ, ಪ್ರಥ್ವೀ, ಸ್ರಗ್ಧರೆ, ಮಾಲಿನೀ, ಶಾರ್ದೂಲವಿಕ್ರೀಡಿತ ಇವು ಮುಖ್ಯವಾದವುಗಳು. ಇವುಗಳಲ್ಲಿ 'ಖ್ಯಾತ ಕರ್ಣಾಟಕಾ' ಎಂದು ಕನ್ನಡ ಛಂದೋಂಬುಧಿಕಾರನು ಹೇಳಿರುವವೂ ಸಮಾವೇಶಗೊಂಡಿವೆ.

# ಸಮಾರೋಪ

ಇಂತಿದು 'ತೀರ್ಥ ಪ್ರಬಂಧ' ಕೇವಲ ೨೩೫ ಶ್ಲೋಕಗಳಲ್ಲಿ ಭಾರತದ ೧೮–೨೦ ನದಿಗಳನ್ನು, ಅವುಗಳ ಸಂಗಮಗಳನ್ನು, ೬೦ಕ್ಕಿಂತ ಮೇಲ್ಪಟ್ಟ ಕ್ಷೇತ್ರಗಳು : ದೇವತೆಗಳನ್ನು ಇಲ್ಲಿ ವಿವರಿಸಿದ್ದಾಗಿದೆ. ಎಲ್ಲಿಯೂ ಅನವಶ್ಯಕ ವಿಷಯ ಮಂಡನೆ ಇಲ್ಲ. ಈ ಹಿಡಿತದಿಂದಾಗಿ ಉದ್ದೇಶಿತ ವಿಷಯಗಳು ಅಚ್ಚುಕಟ್ಟಾಗಿ ನಿರೂಪಣಗೊಂಡಿವೆ. ನಮಗೆ ನೇರವಾಗಿ ಮತ್ತು ಸ್ಪಷ್ಟವಾಗಿ ಅವುಗಳ ಬೋಧೆಯಾಗುತ್ತದೆ. ಹಳೆಯ ಕಾವ್ಯ ಪರಂಪರೆಯಲ್ಲಿ ಇದು ಸಾಮಾನ್ಯವಾಗಿ ಕಾಣಸಿಗದು.

ಇಲ್ಲಿ ಮೆಚ್ಚಬೇಕಾದ ಇನ್ನೊಂದು ಅಂಶವೆಂದರೆ ಭೌಗೋಲಿಕ ಖಚಿತತೆ. ಭಾರತದ ವಿವಿಧ ಪ್ರದೇಶಗಳ ಪ್ರಾಕೃತಿಕ ಪರಿಸರದ ದಿಕ್ಕುದೆಸೆ ಈಗಿನಷ್ಟು ನಿಖರವಾಗಿ, ಆಗಿನ ಕಾಲಕ್ಕೆ ತಿಳಿದು ಬಂದಿರಲಿಲ್ಲ. ಇಡೀ ಭರತಭೂಮಿಯನ್ನು ಯಾತ್ರೆಯ ದೃಷ್ಟಿಯಿಂದ ಪಶ್ಚಿಮ, ಉತ್ತರ, ಪೂರ್ವ, ಮತ್ತು ದಕ್ಷಿಣ ಎಂದು ವಿಭಾಗಿಸಿಕೊಳ್ಳುವಲ್ಲಿಯೂ ಒಂದು ಬಗೆಯ ನಿಖರತೆ ಕಂಡು ಬರುತ್ತದೆ.

ಈ ಮೊದಲು ಹೇಳಿದಂತೆ ಸಂಸ್ಕೃತದಲ್ಲಿ ಪ್ರವಾಸಸಾಹಿತ್ಯ ಎನ್ನುವ ಪ್ರಕಾರವೇ ಇರಲಿಲ್ಲ. ಮಹಾಭಾರತದಲ್ಲಿ ಅರ್ಜುನನು ತೀರ್ಥಯಾತ್ರೆಗೆ ಹೊರಟಾಗಿನ ಕೆಲವು ಸ್ಥಳಗಳು, ನದಿಗಳ ವರ್ಣನೆ ಬಂದಿದೆ. ಹಾಗೆ ಬಂದದ್ದು ಪ್ರಾಸಂಗಿಕವಾಗಿ, ಬೇರೊಂದು ನಿಮಿತ್ತಕ್ಕಾಗಿ. ತೀರ್ಥಪ್ರಬಂಧವು ಹಾಗಲ್ಲ. ಯಾತ್ರೆ ಅಥವಾ ಪ್ರವಾಸವೇ, ಇಡೀ ಕೃತಿಯ ಆಶಯವಾಗಿದೆ. ಆದ್ದರಿಂದ ಇದುವೆ ಸಂಸ್ಕೃತದ ಮೊತ್ತಮೊದಲಿನ ಪ್ರವಾಸ ಗ್ರಂಥವಾಗಿದೆ ಎನ್ನಲಡ್ಡಿಯಿಲ್ಲ.*

---

* ಆದರೆ ಸುಮಾರು ಇದೇ ಕಾಲಕ್ಕೆ ಎಂದರೆ ೧೬ನೆಯ ಶತಮಾನದ ಕೊನೆಯ ಕಾಲದಲ್ಲಿ ಸಮರ ಪುಂಗವ ದೀಕ್ಷಿತ ಎಂಬ ಕವಿ 'ಯಾತ್ರಾ ಪ್ರಬಂಧ' (ಚಂಪೂ) ವೆಂಬ ಕಾವ್ಯವನ್ನು ಬರೆದಿದ್ದಾನೆ. ವಿವರಗಳಿಗಾಗಿ ಅನುಬಂಧ ೨ನ್ನು ನೋಡುವುದು.

ಇಷ್ಟರ ವರೆಗಿನ ವಿವರಣೆಯಿಂದ ಈ ಪ್ರವಾಸಕ್ಕೆ ಧಾರ್ಮಿಕ ಶ್ರದ್ಧೆ ಹಾಗೂ ದೈವಭಕ್ತಿ ಇವೇ ಮುಖ್ಯ ಪ್ರೇರಣೆಗಳಾಗಿವೆ. ಅದಷ್ಟೇ ಉಳಿದು ಕೊಂಡಿದ್ದರೆ ಇದೊಂದು ನೀರಸ ನಿರೂಪಣೆಯಾಗಬಹುದಿತ್ತು. ಶ್ರೀ ವಾದಿ ರಾಜರು ತಮ್ಮ ಕಲ್ಪಕತೆಯನ್ನು ಜೊತೆಗೂಡಿಸಿ ಅದಕ್ಕೆ ವಿಶೇಷವಾದ ಕಳೆ ಕಟ್ಟಿ ದ್ದಾರೆ. ಈ ಕಲ್ಪನಾವಲ್ಲರಿ ಎಷ್ಟೊಂದು ವೈವಿಧ್ಯಮಯವಾಗಿ, ಸಹಜ ಸುಂದರ ವಾಗಿ ಮೂಡಿ ಬಂದಿದೆಯೆಂಬುದನ್ನು ತಿಳಿಯಪಡಿಸುವುದು ಈ ವರೆಗಿನ ನಿರೂ ಪಣೆಯ ಉದ್ದೇಶವಾದಿದೆ. (ಕೆಲವೆಡೆ ಈ ಕಲ್ಪನೆಯ ಜಾಡು ಕೃತಕವೆನಿಸುವುದು ಸಹಜ) ಈ ಮುಕ್ತ ಮನದ ಕಲ್ಪನಾಲಹರಿಯಿಂದಾಗಿ ಉಪಮೆಗಳು, ರೂಪಕ, ಉತ್ಪ್ರೇಕ್ಷೆಗಳು ಅಲ್ಲಲ್ಲಿ ಬೆಳಗಿವೆ. ಚೇತೋಹಾರಿಯಾಗಿವೆ. ಶ್ರೀ ವಾದಿರಾಜರ ಈ ಕೃತಿಯ ಕಾವ್ಯಾತ್ಮಕ ಸ್ವಾರಸ್ಯವು ತಕ್ಕಮಟ್ಟಿಗಾದರೂ ವಾಚಕರಿಗೆ ಮನ ದಟ್ಟಾಗುವುದೆಂಬ ಆಶಯವನ್ನು ವ್ಯಕ್ತಪಡಿಸಿ, ನನ್ನ ಉಪನ್ಯಾಸವನ್ನು ಮುಗಿಸುವೆ.

# ಅನುಬಂಧ-೧

**ಶ್ರೀ ವಾದಿರಾಜಕೃತವೆಂದು ಹೇಳಲಾಗುತ್ತಿರುವ 'ಕನ್ನಡ ಮಹಾ ಭಾರತ ತಾತ್ಪರ್ಯ ನಿರ್ಣಯ' ಹಾಗು 'ಶ್ರೀಕೃಷ್ಣ ಬಾಲಲೀಲೆ'**

ಮಹಾಭಾರತ ತಾತ್ಪರ್ಯನಿರ್ಣಯವು ಮೂಲತಃ ಶ್ರೀಮನ್ಮಧ್ವಾಚಾರ್ಯ ರಿಂದ ರಚಿತವಾದದ್ದು. ಅದಕ್ಕೆ ವಾದಿರಾಜರು ಟೀಕೆ ಬರೆದದ್ದು ನಿಜ. ಆದರೆ ಅದು ಸಂಸ್ಕೃತದಲ್ಲಿದೆ, ಅವರು ಕನ್ನಡದಲ್ಲಿಯೂ ಯಾವುದೊಂದು ವಿಷಯ ಪ್ರತಿಪಾದನೆ ಮಾಡಬಲ್ಲರು. ಆದರೆ ತಾವೇ ಬರೆದ ಸಂಸ್ಕೃತ ಕೃತಿಗೆ ಕನ್ನಡದಲ್ಲಿ ಅದನ್ನೇ ಅನುವಾದಿಸಿಕೊಡಬೇಕಾದ ಅಗತ್ಯವೆಲ್ಲಿತ್ತು ? ಅಲ್ಲದೆ ಅವರು ಕನ್ನಡ ದಲ್ಲಿ ಅನೇಕ ಸೊಗಸಾದ ಹಾಡುಗಳನ್ನು ರಚಿಸಿದ್ದಾರಲ್ಲದೆ ಅವರ ಗದ್ಯಗ್ರಂಥ ಇನ್ನಾವುದೂ ದೊರೆತಿಲ್ಲ.

ಒಂದು ವೇಳೆ ಅವರು ಗದ್ಯಗ್ರಂಥವನ್ನು ಬರೆದಿದ್ದರೆ ಅದು ಸಂಸ್ಕೃತ-ಬಾಹುಲ್ಯದ, ಇಲ್ಲವೆ ತಾವು ಬಾಳಿದ್ದ ಪರಿಸರದ ನುಡಿಗಟ್ಟನ್ನು ಬಳಸಬಹು ದಿತ್ತು. ಆದರೆ ಈಗ ಅವರ ಹೆಸರಿನಲ್ಲಿರುವ ಮೇಲ್ಕಂಡ ಗದ್ಯ ಕೃತಿಯು, ಉತ್ತರ ಕರ್ನಾಟಕದ ಮತ್ತು ಮರಾಠೀ ಮಿಶ್ರಿತವಾದ ಮನೆಬಳಕೆಯ ಕನ್ನಡ ನುಡಿಗಟ್ಟಿನಿಂದ ತುಂಬಿಬಿಟ್ಟಿದೆ. ಮಾದರಿಗೆಂದು ಇಲ್ಲಿ ಒಂದಷ್ಟು ಭಾಗವನ್ನು ಕೊಡುವೆ :

"ಸೂಚನೆ ! ಈ ಇಪ್ಪತ್ತಾರನೆಯ ಅಧ್ಯಾಯದಲ್ಲಿ ದ್ರೋಣಪರ್ವ ಭಾರತ ಕಥೇ ತಾತ್ಪರ್ಯಪೂರ್ವಕ ಶ್ರೀಮದಾಚಾರ್ಯರು ಹೇಳಿತ್ತಾರೆ. ಭೀಷ್ಮ ಸತ್ತ ಮೇಲೆ ಇಂನು ಸೇನಾಪತಿ. ಬೇಕಲ್ಲಾ ದುರ್ಯೋಧನರಾಯಾ ದ್ರೋಣಾ ಚಾರ್ಯರಿಗೆ ಬೇಡಿಕೊಂಡಾ, ಸೇನಾಪತಿತ್ವ ಸ್ವೀಕಾರ ಮಾಡೆಂತಾ. ದ್ರೋಣ ಸಕಲ ವಿದ್ಯಾ ಸಂಪನ ಪರಶುರಾಮಶಿಷ್ಯ ಸಮಸ್ತಭೂಪಾಲಕರೆಲ್ಲಾ ದ್ರೋಣಾ ಚಾರ್ಯನ ಶಿಷ್ಯರಾಗಬೇಕು. ದ್ರೋಣ ಮಹಾಪರಾಕ್ರಮಿಯೆಂದು ದುರ್ಯೋ

ಧನ ದ್ರೋಣಾಚಾರ್ಯನ ಸೇನಾಪತಿತ್ವದಲ್ಲಿ ಅಭಿಷೇಕ ಮಾಡಿದನು. ದುರ್ಯೋಧನನು ಕರ್ಣನಿಗೆ ಕೇಳಿದಾ ಯೆನಂತಾ ನಿನ್ನ ಪ್ರತಿಜ್ಞಾ ಭೀಷ್ಮ ಸಾಯೋರ್ಪರ್ಯಂತರಾ ಯುದ್ಧ ಮಾಡವಲ್ಲೆನೆಂಬೋದು ಭೀಷ್ಮ ರಣದಲ್ಲಿ ಬಿದ್ದಾ ಯಿಂನು ನೀ ಯುದ್ಧ ಮಾಡೆಂದು ಪ್ರಾರ್ಥಿಸಲಿಕ್ಕೆ ಕರ್ಣ ಅವಶ್ಯ ಯುದ್ಧ ಮಾಢೇನೆಂದು ಹೇಳಿ ಭೀಷ್ಮಗೆ ಅಜ್ಞಾ ಕೇಳಲಿಕ್ಕೆ ಹೋದನು.

ಇಂಥ ವಿಚಿತ್ರವಾದ ಹಂಡಬಂಡ ಕನ್ನಡ ಭಾಷೆಯು ವಾದಿರಾಜರದೆಂದು ಹೇಳಲಿಕ್ಕಾದೀತೆ ? ಪ್ರತಿ ಅಧ್ಯಾಯದ ಕೊನೆಯಲ್ಲಿ ಬರುವ 'ಶ್ರೀ ವಾದಿರಾಜರ ದೆಂದು ಹೇಳಲಿಕ್ಕಾದೀತೆ ? ಪ್ರತಿ ಅಧ್ಯಾಯದ ಕೊನೆಯಲ್ಲಿ ಬರುವ 'ಶ್ರೀ ವಾದಿರಾಜ ಯತಿವರ್ಯ ವಿರಚಿತಾಯಾಂ ಕರ್ನಾಟಕ ಟೀಕಾಯಾಂ' ಎಂಬುದು ಸರ್ವಥಾ ನಿಜವಲ್ಲ.

ಈ ಕನ್ನಡ ಟೀಕಾ ಗ್ರಂಥವು ಮೊದಲು ಬೆಳಗಾಂವಿಯ ಆಬಾಜಿ ರಾಮ ಚಂದ್ರ ಸಾವಂತರ ರಾಮತತ್ವ ಪ್ರಕಾಶ ಛಾಪಖಾನೆಯಲ್ಲಿ, ಪೋಥಿ ಸ್ವರೂಪ ದಲ್ಲಿ ಪ್ರಕಟವಾಯಿತು. (ಕ್ರಿ. ಶ. ೧೮೮೧) (ಇಂಥ ಅನೇಕ ಹಸ್ತ ಪ್ರತಿಗಳನ್ನು ಮಹಾರಾಷ್ಟ್ರ ಹಾಗೂ ವಿಜಾಪುರ, ಬೆಳಗಾಂವಿ ಜಿಲ್ಲೆಗಳಿಂದ ದೊರಕಿಸಿ ಸಾವಂತರು ಪೋಥಿ ರೂಪದಲ್ಲಿ ಮುದ್ರಿಸಿ ಹೊರತಂದಿದ್ದಾರೆ) ಇದರ ಭಾಷೆ ಯನ್ನು ನೋಡಿದರೆ, ಇವೆರಡು ಜಿಲ್ಲೆಗಳಲ್ಲಿದ್ದ ಯಾರೋ ಒಬ್ಬ ವಾದಿರಾಜರ ಭಕ್ತನು ಸಂಸ್ಕೃತ ಟೀಕಾ ಗ್ರಂಥವನ್ನು ತನ್ನ ಭಾಗದ ವಿಶಿಷ್ಟ ಕನ್ನಡದಲ್ಲಿ ಭಟ್ಟಿ ಇಳಿಸಿದ್ದಾನೆಂಬುದು ಸ್ಪಷ್ಟ. ಈ ಕನ್ನಡ ಕೃತಿ ವಾದಿರಾಜರದ್ದಲ್ಲ.

### ಶ್ರೀಕೃಷ್ಣ ಬಾಲಲೀಲೆ :

ಶ್ರೀ ವಾದಿರಾಜಕೃತವೆಂದು ಹೇಳಲಾದ ಈ ಕಾವ್ಯವು ದ್ವಿಪದಿಯಲ್ಲಿದೆ. ಕ್ರಿ. ಶ. ೧೯೩೦ ರಲ್ಲಿ ಮೊದಲು ಮುದ್ರಿತವಾಗಿತ್ತು. ಈಚೆಗೆ ೧೯೮೮ ರಲ್ಲಿ ಅದರ ಎರಡನೆಯ ಆವೃತ್ತಿಯನ್ನು ವಿಸ್ತಾರವಾದ ವಿಮರ್ಶಾತ್ಮಕವಾದ ಮುನ್ನುಡಿಯೊಡನೆ ಹೊರತರಲಾಗಿದೆ. ಇದಾದರೂ ವಾದಿರಾಜರ ಕೃತವಲ್ಲ ಎನ್ನುವುದಕ್ಕೆ ಈ ಹಲವು ಪುರಾವೆಗಳನ್ನು ಕೊಡಬಹುದು.

ಅ) ನಾಂದೀ ಪದ್ಯಗಳಲ್ಲಿ ಮಾಧ್ವ ಸಂಪ್ರದಾಯದ ದೇವತಾ ತಾರ ತಮ್ಯವು ತಪ್ಪಿದೆ. (ಪದ್ಯ ಸಂಖ್ಯೆ ೩–೭)

ಆ) ಕೃಷ್ಣನ ಬಾಲ್ಯದ ಕುರಿತಾದ ಇದರ ಕಥಾನಕವು ವಾದಿರಾಜರ 'ರುಕ್ಮಿಣೀಶ ವಿಜಯ' ದಿಂದ ತೆಗೆದುಕೊಂಡದ್ದಿದೆ. ಉದಾ.ಗೆ- ರಾಜರು ಪ್ರಯಾಣಕ್ಕೆ ಹೊರಡುವ ಮುಂಚೆ ತಮ್ಮ ಹಾಸುಗೆ ಯನ್ನು ಕಳಿಸುವರು- ಎಂಬ ಕಲ್ಪನೆ. ಇದು ಪರಮಾತ್ಮನು ಶೇಷನನ್ನು ಕುರಿತು ದೇವಕಿಯ ಗರ್ಭದಲ್ಲಿ ಹೋಗಿ ಅವರಿಸು ಎಂದು ಹೇಳಿದುದು.

ಹಾಸಿಗೆಯಾಗಿರುವ ಶೇಷದೇವರನ್ನು ಕರೆದು
ಜ್ಯೇಷ್ಠನಾಗಿ ಮುಂಚ್ಯವತರಿಸು ಎಂದನು ೧೧ (ಪೂ. ಪ. ೧೮)

ಈ ವಿಚಾರವು 'ರುಕ್ಮಿಣೀಶ ವಿಜಯ'ದಲ್ಲಿ ಬಂದದ್ದೇ ಇದೆ :

ಪ್ರಯಾಣೇ ಉಪಸ್ಥಿತೇ ಸತಿ: ಸ್ವಕೀಯಾಂ ಶಯ್ಯಾಂ
ಪುರತಃ ಸಂಪ್ರೇಷಯಂತಿ ಕಿಲ

ಇ) ದ್ವಿತೀಯಾಕ್ಷರ ಪ್ರಾಸವು ಕನ್ನಡಕ್ಕೆ ಕಡ್ಡಾಯ. ಆದರೆ ಈ ಕೃತಿ ಯಲ್ಲಿ ಅದನ್ನು ಗಾಳಿಗೆ ತೂರಿದ್ದಾಗಿದೆ. ಅದೇ, ವಾದಿರಾಜ ವಿರಚಿತ ಪ್ರತಿಯೊಂದು ಕೀರ್ತನೆಯಲ್ಲಿ, ಪ್ರತಿಯೊಂದು ನುಡಿಯಲ್ಲಿ ಇದನ್ನು ಅಕ್ಷರಶಃ ಪಾಲಿಸಲಾಗಿದೆ.

ಈ) ಈ ಮೊದಲು ಪ್ರಸ್ತಾಪಿಸಿದ, ಉತ್ತರ ಕರ್ನಾಟಕಕ್ಕೇ ಮೀಸಲಾದ ನುಡಿಗಟ್ಟುಗಳು ಇದರಲ್ಲಿ ಅಸಂಖ್ಯವಾಗಿ ಕಂಡು ಬರುತ್ತವೆ. ಕೈತಾಗಿದ (at random) ಕೆಲವನ್ನು ಮಾತ್ರ ಇಲ್ಲಿ ಕೊಟ್ಟಿದೆ :

ಹಾಕ್ಸಿ, ಫಳಿಸಿತು, ಗಂಡಾಂತ, ಎಷ್ಟಂತ, ಬಂದ್ಯೊ, ಚೊಚ್ಲ ಮಣಕ, ದಾವ, ಇದಲ್ಲದೆ ಹೊಸಗನ್ನಡದಲ್ಲಿ ಹೆಚ್ಚಾಗಿ ಬಳಕೆ ಯಾಗಿರುವ ಪದಗಳೂ ಕಂಡು ಬರುತ್ತವೆ. ಕೂತು, ಘಟ್ಯಾಗಿ, ಭಾಳ, ಇತ್ಯಾದಿ.

ಮಹಾಭಾರತದ ತಾತ್ಪರ್ಯ ನಿರ್ಣಯದ ಕನ್ನಡ ರೂಪದ ಬಗ್ಗೆ ಕೇಳಿದ ಪ್ರಶ್ನೆಯನ್ನೆ ಎಂದರೆ ಈ ಮುಂಚೆ ಸಂಸ್ಕೃತದಲ್ಲಿ ಬರೆವದ್ದನ್ನೇ ಕನ್ನಡದಲ್ಲಿ ಬರೆಯುವ ಅವಶ್ಯಕತೆ ವಾದಿರಾಜರಿಗೆ ಇದ್ದಿತೆ ? ಎಂಬುದನ್ನು ಪುನಃ ಕೇಳ ಬೇಕಾಗುವುದು.

ಆದ್ದರಿಂದ ಈ ಕನ್ನಡ ಹಾಡುಗಬ್ಬವನ್ನು ಜಾನಪದ ಹಾಡಿನ ಒಲವಿರುವ ಓರ್ವ ಕವಿ ರಚಿಸಿದ್ದಾನೆ. (ವಿಶೇಷತಃ ಜಮಖಂಡಿಯ ಆಸುಪಾಸಿನವನಾಗಲೀ, ಮರಾಠೀ ಪ್ರಭಾವವು ವಿಶೇಷವಾಗಿರುವ ಉತ್ತರ ಕರ್ನಾಟಕಸ್ಥನಾಗಲೀ ಆತನಿರ ಬೇಕು) ಅವನು ವಾದಿರಾಜರ 'ರುಕ್ಮಿಣೀಶ ವಿಜಯ' ಕಾವ್ಯವನ್ನು ಮನನ ಮಾಡಿ, ಅದರ ಸುಲಭೀಕೃತ ಹಾಡುಗಬ್ಬವೆಂಬಂತೆ ರಚಿಸಿದ್ದಾನಾದ್ದರಿಂದ 'ವಾದಿರಾಜತೀರ್ಥ ವಿರಚಿತ' ಎಂದು ಕರೆದಿದ್ದಾನೆ.

# ಅನುಬಂಧ–೨

## ಸಮರಪುಂಗವ ದೀಕ್ಷಿತನ 'ಯಾತ್ರಾ ಪ್ರಬಂಧ'

ಸಮರಪುಂಗವ ದೀಕ್ಷಿತನು ದಕ್ಷಿಣ ದೇಶದ ಬಟವನ ಎಂಬ ಊರಿನವ. ವಿದ್ಯೆ ಕಲಿಯಲೆಂದು ಸುಪ್ರಸಿದ್ಧ ಅಪ್ಪಯ್ಯ ದೀಕ್ಷಿತರಲ್ಲಿ ಹೋದನು. ಅವರ ಕಾಲವನ್ನು ಕ್ರಿ. ಶ. ೧೫೫೪ ರಿಂದ ಆರುಭಿಸುವ ಪರಿಪಾಠವಿರುವುದರಿಂದ, ಅವರಿಗಿಂತ ಕಿರಿಯನಾದ ಸಮರಪುಂಗವನು ಆ ಸುಮಾರಿಗೆ ಜನಿಸಿರಬಹುದೆಂದು, ಯಾತ್ರಾ ಪ್ರಬಂಧ ಕೃತಿಯ ಸಂಪಾದಕ ಕೇದಾರನಾಶ ಶರ್ಮ ಊಹಿಸಿದ್ದಾರೆ. ನಮಗೆ ತೀರ್ಥಪ್ರಬಂಧದ ರಚನಾ ವರ್ಷವು ನಿಶ್ಚಿತವಾಗಿ ಗೊತ್ತಿಲ್ಲದಿದ್ದರೂ. ಯಾತ್ರಾ ಪ್ರಬಂಧವು ೧೫೮೦ರ ಒಳಹೊರಗಿನ ಕೃತಿಯಾದ್ದರಿಂದ, ಅದಕ್ಕಿಂತ ತುಸು ಮುಂಚೆಯೇ ತೀರ್ಥಪ್ರಬಂಧದ ರಚನೆಯಾಗಿರಬೇಕು. ಏನಿದ್ದರೂ ಇದು ಕೂಡ, ಅದೇ ಕಾಲದ ಪ್ರವಾಸ ಸಾಹಿತ್ಯವೇ ಎನ್ನಬಹುದು. ಒಬ್ಬರ ಕೃತಿಯನ್ನು ಇನ್ನೊಬ್ಬರು ನೋಡಿಲ್ಲವೆಂಬುದು ಸ್ಪಷ್ಟ.

ಯಾತ್ರಾ ಪ್ರಬಂಧವು ಒಂದು ದೊಡ್ಡ ಕಾವ್ಯ. ಅದನ್ನು ಮಹಾಕಾವ್ಯವೆಂದೇ ಬರೆಯ ಹೊರಟದ್ದಾಗಿದೆ. ಅದರ ಒಂಬತ್ತು ಆಶ್ವಾಸಗಳಲ್ಲಿ ೧೨೦೦ಕ್ಕೆ ಮೇಲ್ಪಟ್ಟು ಶ್ಲೋಕಗಳಿದ್ದು, ಅಲ್ಲಲ್ಲಿ ಗದ್ಯವೂ ಸೇರ್ಪಡೆಯಾಗಿರುವುದರಿಂದ ಇದೊಂದು ಚಂಪೂ ಕಾವ್ಯವಾಗಿದೆ: ಇಂಥ ಕಾವ್ಯದಲ್ಲಿ ಅಷ್ಟಾದಶ ವರ್ಣನೆಗಳು ಬಂದಿರುವುದು ಸ್ವಾಭಾವಿಕವೇ. ಅದಕ್ಕೇನೆ ಕವಿ ತನ್ನಲ್ಲಿ ಕಾವ್ಯ ಸಾಮರ್ಥ್ಯವನ್ನು ವಿನಿಯೋಗಿಸಿದ್ದಾನೆ.

ಅವನೂ ಸಮಗ್ರ ಭಾರತದ ಯಾತ್ರೆಯನ್ನು ಮಾಡಿದ್ದಾನೆ. ಆದರೆ ಅವನು ಸಂದರ್ಶಿಸಿದ ಕ್ಷೇತ್ರಗಳು ಕಡಿಮೆ. ಪಶ್ಚಿಮ ದಿಕ್ಕಿಗೆ ಅವನು ವಿಶೇಷವಾಗಿ ಹೋದಂತೆ ಕಾಣಲಿಲ್ಲ. ತೀರ್ಥಪ್ರಬಂಧದಲ್ಲಿಯ ಕೆಲವು ಕ್ಷೇತ್ರಗಳು ಮತ್ತು ದೇವತೆಗಳು ಈ ಪ್ರಬಂಧದಲ್ಲಿಯೂ ವರ್ಣಿತವಾಗಿವೆ. ಉದಾ.ಗೆ ಕಾಂಚಿಯ ಏಕಾಮ್ರೇಶ್ವರ ಮತ್ತು ಕಾಮಾಕ್ಷಿ, ಮಥುರಾ, ಕೇದಾರ, ಪುರಿ, ಕಾಶಿ, ಗಯಾ ಇತ್ಯಾದಿ. ಆದರೆ ಇಬ್ಬರ ಕವಿಗಳ ದೃಷ್ಟಿಕೋನ ಬೇರೆ ಬೇರೆಯೇ ಎಂಬುದನ್ನು ಮರೆಯಲಾಗದು. ಅಂತೆಯೇ ಅವರ ವರ್ಣನೆಗಳು ಕೂಡ.

# ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

## ಪ್ರಚಾರೋಪನ್ಯಾಸಮಾಲೆ ಪುಸ್ತಕ ಪ್ರಕಟಣೆಗಳು:

| | |
|---|---|
| ಎದೆಹಾಲು ಕೊಡುಗೆ | 00-50 |
| ಗ್ರಾಮೀಣ ತಂತ್ರಜ್ಞಾನ | ,, |
| ಜೇನ್ ಆಸ್ಟಿನ್ | ,, |
| ಸಾರ್ವಜನಿಕ ಆಡಳಿತದ ಗುಣದೋಷಗಳು | ,, |
| ಸೂಕ್ಷ್ಮ ಜೀವಿಗಳು ಹಾಗೂ ನಾವು | ,, |
| ಗಾಯಡಿ ಮೋಪಾಸಾನ ಸಣ್ಣ ಕತೆಗಳು | ,, |
| ಬೀದರ ಜಿಲ್ಲೆಯಲ್ಲಿ ಕೃಷಿ | ,, |
| ಭಾರತೀಯ ಗ್ರಾಮೀಣ ಜೀವನದ ಆಧುನೀಕರಣ | ,, |
| ಜಾನಪದ ವೃತ್ತಿ ಗಾಯಕರು | ,, |
| ಪ್ರಕೃತಿಯೇ ಗುರು | ,, |
| ವಿಜಯನಗರ ಸಾಮ್ರಾಜ್ಯದ ಸಾಂಸ್ಕೃತಿಕ ಕೊಡುಗೆ | ,, |
| ವಚನಕಾರರು ಮತ್ತು ವಚನಾಂಕಿತಗಳು | ,, |
| ಅಂಬಿಗರ ಚೌಡಯ್ಯ | ,, |
| ಅಣುಜೀವಿ ಗೊಬ್ಬರಗಳು | ,, |
| ಸ್ವರವಚನಗಳಲ್ಲಿ ವಿಡಂಬನೆ | ,, |
| ನಮ್ಮ ನೀರಾವರಿ ಯೋಜನೆಗಳು | ,, |
| ಕಲಬುರ್ಗಿ ಕನ್ನಡ | ,, |
| ಕುಟುಂಬ ಜೀವನ ಶಿಕ್ಷಣ | ,, |
| ಡಾ. ಬಾಬಾಸಾಹೇಬ ಅಂಬೇಡ್ಕರ್ | 1-00 |
| ಕಾನೂನಿನ ದೃಷ್ಟಿಯಲ್ಲಿ ಆಹಾರದ ಕಲಬೆರಕೆ | ,, |
| ಗೋನವಾರದ ರಾಮದಾಸರು | ,, |
| ಕನ್ನಡ ಅಸಂಗತ ನಾಟಕಗಳು | ,, |
| ಹರಿಶ್ಚಂದ್ರ ಕಾವ್ಯ ಮತ್ತು ಮೌಲ್ಯಗಳು | ,, |
| ನಲವಡಿ ಶ್ರೀಕಂಠಶಾಸ್ತ್ರಿಗಳ ಲಾವಣಿಗಳು | ,, |
| ಖನಿಜಗಳು | ,, |
| ಸಮೂಹ ಮಾಧ್ಯಮಗಳು | ,, |
| ಮಹಾ ಮಾನವತಾವಾದಿ ಮೌನೇಶ್ವರ | ,, |
| ಅಕ್ಕ ಮಹಾದೇವಿ | ,, |
| ತಾಂಡಾ ಸಂಸ್ಕೃತಿ | ,, |
| ಕುಡಿಯುವ ನೀರು | |
| ಬೀದರ ಜಿಲ್ಲೆಯ ಶಾಸನಗಳು | ,, |
| ರೇಡಿಯೊ ಹವ್ಯಾಸಿ-ಹಾಮ್ | ,, |

# ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ

## ಪ್ರಸಾರಾಂಗ ಪುಸ್ತಕ ಪ್ರಕಟಣೆಗಳು

| | |
|---|---|
| ಹರದೇಶಿ ನಾಗೇಶಿ | 45-00 |
| ಗುಲಬರ್ಗಾ ವಿಭಾಗದ ಲೇಖಕರು | 20-00 |
| ಜನಪದ ನೂರೆಂಟು ಕತೆಗಳು | 50-00 |
| ಯಯಾತಿ | 20-00 |
| ಶ್ರೀ ಕುಮಾರ ವಿಜಯ ವಿಳಾಸಂ | 100-00 |
| ವಿಶೇಷ ಉಪನ್ಯಾಸಮಾಲೆ ಪುಸ್ತಿಕೆಗಳು | 1-00 |
| ಕರ್ನಾಟಕ ಇಂದು ಮತ್ತು ನಾಳೆ | 6-00 |
| Higher Education for the Masses | 8-00 |
| Economic Development & Social Change in Karnataka | 7-00 |
| The Writer and the contemporary-Environment | 7-00 |
| The Indian Judiciary to be or not to be | 18-00 |
| Energy Scenario-India, Karnataka | 7-00 |
| Judiciary in India from 1724 onwards & after the Constitution (1950) | 12-00 |
| ಕಥಾ ಗಂಗಾ | 10-00 |
| ಶ್ರೀವಾದಿರಾಜರ ತೀರ್ಥಪ್ರಬಂಧ | 10-00 |
| ದಾಸಸಾಹಿತ್ಯದಲ್ಲಿ ದ್ವೈತದರ್ಶನ — ಸಂಗೀತದ ಮೌಲ್ಯ | 10-00 |

## RESEARCH JOURNALS:

| | |
|---|---|
| ಕಲಾಗಂಗಾ (ಕನ್ನಡ) ಸಂಶೋಧನ ಪತ್ರಿಕೆ | 20-00 |
| JNANA GANGA – Arts, Social Science, Commerce, Management, Law and Education | 20-00 |
| VIJNANA GANGA – Science & Technology | 20-00 |